# ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?



ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org



# ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ಗ್ರಂಥಕರ್ತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಡಿಸೆಂಬರ್ –2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಒಂದುಕಡೆ ಮುಸ್ಲಿಮ್‌ರು ಮತ್ತೊಂದುಕಡೆ ಕ್ರೈಸ್ತರು ಯೇಸು ಮರಣವನ್ನು ಕುರಿತು ಕಳೆದ ಕೆಲವು ವರ್ಷಗಳಿಂದ ವಾದೋಪವಾದನೆಗಳು ಮಾಡುತ್ತಿದ್ದಾರೆ. ಮಾಡುತ್ತಲೇ ಇದ್ದಾರೆ. ಇಂದಿಗೂ ಆ ಸಮಸ್ಯೆ ಒಂದು ಗಟ್ಟು ಸೇರಲಿಲ್ಲ. ನಿಜಕ್ಕೆ ಯೇಸುನನ್ನು ಕ್ರೈಸ್ತ ಬೋಧನೆಗಳು ಹೇಳಿದ ಒಬ್ಬ ಪ್ರವಕ್ತಯೆಂದು ಒಂದು ವಿಧವಾಗಿ ಹೇಳಬಹುದು. ಕ್ರೈಸ್ತರು ತಮ್ಮ ಪ್ರವಕ್ತನಾಗಿ ಹೇಳಿಕೊಳ್ಳುವ ಯೇಸುನನ್ನು ಮುಸ್ಲಿಮ್ ಸೋದರರು ಬೈಬಲ್‌ನಲ್ಲಿನ ವಾಕ್ಯಗಳನ್ನು ಆಧಾರ ಮಾಡಿಕೊಂಡು 'ಯೇಸು ಶಿಲುಬೆ ಮೇಲೆ ಮರಣಿಸಲಿಲ್ಲ' ಎಂದು ಹೇಳುತ್ತಿರುವಾಗ, ಕ್ರೈಸ್ತರು ಮಾತ್ರ ಅದೇ ಬೈಬಲ್‌ನಲ್ಲಿನ ವಾಕ್ಯಗಳನ್ನು ತೋರಿಸುತ್ತಾ 'ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆಂದು' ಹೇಳುತ್ತಿದ್ದಾರೆ. ಒಂದೇ ಬೈಬಲ್ ಗ್ರಂಥದಿಂದ ಒಂದು ಕಡೆ ಮುಸ್ಲಿಮ್‌ರು, ಮತ್ತೊಂದು ಕಡೆ ಕ್ರೈಸ್ತರು ತಮ್ಮ ವಾದನೆಗಳನ್ನು ಹೇಳುತ್ತಿದ್ದಾರೆ. ಕಳೆದ ಸ್ವಲ್ಪ ಕಾಲದಿಂದ ಎರಡು ಮತದವರ ವಾದನೆಗಳನ್ನು ಕೇಳಿದ ನಾವು ನಮಗೆ ತಿಳಿಯಲ್ಪಟ್ಟ ವಿಧಾನವನ್ನು ಕುರಿತು ಹೊರಗೆ ಹೇಳಿಕೊಂಡಿದ್ದೇವೆ. ನಾನು ಹಿಂದೂ ಸಮಾಜದಲ್ಲಿ ಹುಟ್ಟಿದವನು, ನಾನು ಯೇಸು ಮರಣವನ್ನು ಕುರಿತು ಮಾತನಾಡಿದರೆ ಒಟ್ಟಾರೆ ಮೂರು ಮತದವರು ಆ ವಿಷಯವನ್ನು ಕುರಿತು ಮಾತನಾಡಿದಂತಾಗುತ್ತದೆ. ಕ್ರೈಸ್ತರು ಹೇಳುವ ಮಾತುಗಳಿಗು, ಮುಸ್ಲಿಮ್‌ರು ಹೇಳುವ ಮಾತುಗಳಿಗು ಎಷ್ಟೋ ವ್ಯತ್ಯಾಸವಿದೆ. ಹಾಗೆಯೇ ಈಗ ನಾವು ಹೇಳುವ ಮಾತುಗಳು ಸಹ ಅವರಿಬ್ಬರ ವಾದನೆಗಳಿಗೆ ಭಿನ್ನವಾಗಿ ಇರುವುದನ್ನನುಸರಿಸಿ ಯೇಸು ಮರಣವನ್ನು ಕುರಿತು ಮೂರು ಮತದವರಿಗೆ ಮೂರು ವಿಧಗಳ ಉದ್ದೇಶಗಳಿರುವಂತೆ ಹೊರಗಿನ ಪ್ರಜೆಗಳಿಗೆ ತಿಳಿಯುತ್ತಿದೆ.

ಕ್ರೈಸ್ತರು, ಮುಸ್ಲಿಮ್‌ರು ತಮ್ಮ ವಾದನೆಗಳನ್ನು 'ಯುಟ್ಯೂಬ್'ನಲ್ಲಿ (ಇಂಟರ್‌ನೆಟ್‌ನಲ್ಲಿ) ಇಟ್ಟಿದ್ದಾರೆ. ಆದ್ದರಿಂದ ಅವರ ವಾದನೆಗಳನ್ನು 'ಯುಟ್ಯೂಬ್' ವೆಬ್‌ಸೈಟ್‌ನಲ್ಲಿ ನೀವು ನೋಡಬಹುದು. ಇಲ್ಲಿ ನಮ್ಮ ವಾದನೆಯನ್ನು ನಾವು ಗ್ರಂಥರೂಪದಲ್ಲಿ ಬರೆಯುತ್ತಿದ್ದೇವೆ. ನಮ್ಮ ವಾದನೆ 7ಶಾಸ್ತ್ರಬದ್ಧವಾಗಿ,

ಹೇತುಬದ್ಧವಾಗಿ ಇರಬೇಕೆಂದು ಮಧ್ಯಾತ್ಮವನ್ನು ಕೋರಿಕೊಳ್ಳುತ್ತಿದ್ದೇನೆ. **ಕ್ಷರ, ಅಕ್ಷರ, ಪುರುಷೋತ್ತಮ ಎಂಬ** ಮೂರು ಆತ್ಮಗಳಲ್ಲಿ ಮಧ್ಯಾತ್ಮದ ಸಹಕಾರದಿಂದ ತಿಳಿಸುವ ವಿಷಯಗಳೆಲ್ಲವೂ ಎಲ್ಲರಿಗೂ ಅರ್ಥವಾಗುವಂತೆ ಇರಬೇಕೆಂದು ತಿಳಿಯುತ್ತಿದ್ದೇವೆ. ನಾನು ಒಂದು ಮತಕ್ಕೆ ಗುರು ಅಲ್ಲ. ಮೂರು ಮತಗಳಿಗೆ ಸಂಬಂಧಿಸಿದ ಪರಿಮಿತಿ ವಿಷಯಗಳಿಗೆ ಮಾತ್ರ ಗುರುವಾಗಿ ಹೇಳುತ್ತಿದ್ದೇನೆ. ಆದ್ದರಿಂದ ಕ್ರೈಸ್ತರಿಗೆ ಸಂಬಂಧಿಸಿದ ವಿಷಯವನ್ನು ಸಹ ನಾನು ಹೇಳಬೇಕಾಗಿ ಬಂದಿದೆ.

ಯೇಸು ಜೀವನವನ್ನು ಮೂರು ಭಾಗಗಳಾಗಿ ವಿಭಜಿಸಬಹುದು. ಒಂದು ಭಾಗದಲ್ಲಿ ಮೂವತ್ತು (30) ವರ್ಷಗಳ ಬಾಲ್ಯ ಜೀವನ ಇರುತ್ತದೆ. ಮತ್ತೊಂದು ಭಾಗದಲ್ಲಿ ಮೂರು (3) ವರ್ಷಗಳ ಜೀವನ ಎಲ್ಲರಿಗೂ ತಿಳಿದ ಜೀವನವಿರುತ್ತದೆ. ಮೂರು ಭಾಗಗಳಲ್ಲಿ ಮೂವತ್ತುಮೂರು ವರ್ಷಗಳ ನಂತರ ಜೀವನ, ಯಾರಿಗೂ ತಿಳಿಯದ ಯೇಸು ಜೀವನವಿರುತ್ತದೆ. 30 ವರ್ಷಗಳು ಒಂದು ಭಾಗವಾಗಿದ್ದು, 3 ವರ್ಷಗಳು ಎರಡನೆ ಭಾಗವಾಗಿದ್ದು, 33 ವರ್ಷಗಳ ನಂತರ ಕಳೆದ ಜೀವನ ಮೂರನೆ ಭಾಗವಾಗಿ ಇದೆ. ಯೇಸು ಜೀವನದಲ್ಲಿ ಎರಡು ಭಾಗಗಳು ಮಾತ್ರ ಎಲ್ಲರಿಗೂ ತಿಳಿದಿದೆ. ಆದರೆ ಯೇಸು ಮೂರನೆ ಭಾಗವೊಂದರ ಜೀವನ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಇತ್ತ ಕ್ರೈಸ್ತರಿಗಾಗಲಿ, ಅತ್ತ ಮುಸ್ಲಿಮ್‌ರಿಗಾಗಲಿ ಉಳಿದ ಹಿಂದೂಗಳಿಗಾಗಲಿ ತಿಳಿಯದ ಮೂರನೆ ಭಾಗದ ಜೀವನ ಇಲ್ಲಿ ನೊಂದಾಯಿಸಲಾಗಿದೆ. ಯೇಸು ಮೂರನೆ ಭಾಗದ ಜೀವನ ಚರಿತ್ರೆ ಆಧಾರ ಇಲ್ಲದಿರುವುದೆಂದು ಕೆಲವರು ಹೊಡೆದುಹಾಕಬಹುದು. ಅವರು ಯೇಸು ಮೂರನೆಯ ಭಾಗ ಜೀವನವನ್ನು ಒಪ್ಪಿಕೊಳ್ಳದೆ ಹೋಗುವುದಕ್ಕೆ ಎಲ್ಲರಿಗೂ ಅಧಿಕಾರವಿದ್ದರೂ, ನಾನು ಮಾತ್ರ ಒಪ್ಪಿಸುವುದಕ್ಕೆ ಆಗದಿದ್ದರೂ, ಕೇವಲ ತಿಳಿಸುವುದಕ್ಕೇ **ಮಧ್ಯಾತ್ಮ** ತಿಳಿಸಿರುವ ಸತ್ಯವನ್ನು ತಿಳಿಸುತ್ತಿದ್ದೇನೆ.

ಯೇಸು ಮೂರನೆ ಭಾಗದ ಜೀವನವನ್ನು ಕುರಿತು ತಿಳಿದವನು ಯೇಸು ಒಬ್ಬನು ಮಾತ್ರವೇ. ಆತನು ವಿನಹ ಇತರ ಮನುಷ್ಯರಿಗೆ ಯಾರಿಗೂ ಯೇಸು ಮೂರನೆ ಭಾಗ ಜೀವನ ಕುರಿತು ತಿಳಿದಿಲ್ಲ. ಆತನ ಕೊನೆಯ ಜೀವನ ಆತನು ಹೇಳಿದರೆ ಹೊರತು ಇತರರು ಯಾರೂ ಹೇಳುವುದಕ್ಕೆ ಸಾಧ್ಯವಿಲ್ಲ. ಆದರೆ ಇಲ್ಲಿ ಒಂದು ಅವಕಾಶ ಇದೆಯೆಂದು ನಿಮಗೆ ಪ್ರತ್ಯೇಕವಾಗಿ ತಿಳಿಸುತ್ತಿದ್ದೇನೆ. ಅದೇನೆಂದರೆ ಯೇಸು ಒಂದು ಶರೀರವನ್ನು ಧರಿಸಿ ಹುಟ್ಟಿದ ಮನುಷ್ಯನೇಯೆಂದು ಹೇಳಬಹುದು. ಯೇಸು ಶರೀರದಲ್ಲಿ ಪ್ರಕೃತಿ ಸಿದ್ಧವಾಗಿ ಎಲ್ಲಾ ಅವಯವಗಳು ಇರುವುದಲ್ಲದೆ ಆತನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಿರುತ್ತವೆ. ಇದು ಪ್ರತಿ ಶರೀರದಲ್ಲಿರುವ ಸತ್ಯವೇ. ಜೀವಾತ್ಮ ಪ್ರತಿ ಶರೀರದಲ್ಲಿಯೂ ಬೇರೆ ಬೇರೆಯಾಗಿ ಇರುವಾಗ, ಆತ್ಮ ಪರಮಾತ್ಮ ಎಲ್ಲಾ ಶರೀರಗಳಲ್ಲಿಯೂ ಒಂದಾಗಿಯೇ ಇರುತ್ತದೆ. ಪ್ರಪಂಚಕ್ಕೆಲ್ಲಾ ಒಬ್ಬನೇ ಪರಮಾತ್ಮ, ಒಂದೇ ಆತ್ಮ ಇರುತ್ತದೆ. ಆದರೆ ಪರಮಾತ್ಮ ರೂಪ, ನಾಮ, ಕ್ರಿಯೆಗಳು ಇಲ್ಲದವನು ಆಗಿರುವುದರಿಂದ ದೇವರು ಅಥವಾ ಅಲ್ಲಾಹ್ ಎನ್ನುವ ಪರಮಾತ್ಮ ಮಾತನಾಡುವುದಿಲ್ಲ, ಕೆಲಸವನ್ನು ಮಾಡುವುದಿಲ್ಲ. ಮಧ್ಯದಲ್ಲಿರುವ ಆತ್ಮ ಮಾತ್ರವೇ ಎಲ್ಲಾ ಕೆಲಸಗಳು ಮಾಡುತ್ತಾ, ಎಲ್ಲದಕ್ಕೂ ಕಾರಣವಾಗಿದೆ. ಜೀವಾತ್ಮ ಯಾವ ಬಲ ಇಲ್ಲದವನಾಗಿ, ಯಾವ ಅವಯವ ಇಲ್ಲದವನಾಗಿ ಇರುವುದರಿಂದ ಜೀವಿಯು ಏನು ಮಾಡದವನಾಗಿ ಇದ್ದಾನೆ. ಮಧ್ಯಾತ್ಮ ಮಾತ್ರ ಶರೀರದಲ್ಲಿ ನಡೆಯುವ ವಿಷಯಗಳನ್ನು ತಾನೇ ಸ್ವತಃವಾಗಿ ತಿಳಿಸಬಲ್ಲದು. ಶರೀರದಲ್ಲಿ ಎಲ್ಲಾ ಕೆಲಸಗಳನ್ನು ತಾನೇ ಮಾಡಬಲ್ಲದು. ನಾನು ಮಧ್ಯಾತ್ಮನನ್ನು ಕೇಳಿಕೊಂಡಾಗ ಆತ್ಮ ನನಗೆ ತಿಳಿದ ವಿಷಯಗಳನ್ನು ಇಲ್ಲಿ ನಿಮಗೆ ತಿಳಿಸುತ್ತಿದ್ದೇನೆ.

**ಪ್ರಶ್ನೆ :– ನೀವು ಏನು ಹೇಳಿದರೂ ನಿಮ್ಮನ್ನು ಪ್ರಶ್ನಿಸುವುದಕ್ಕೆ ನಾನು ಸಿದ್ಧವಾಗಿರುತ್ತೇನೆ. ನನ್ನ ಪ್ರಶ್ನೆಗೆ ಉತ್ತರ ಹೇಳಿ ಮುಂದಕ್ಕೆ ಹೋಗಬೇಕೆಂದು ಹೇಳುತ್ತಿದ್ದೇನೆ. ಆತ್ಮ ಎಲ್ಲರಿಗೂ ಇರುವಾಗ ಯಾರಿಗೂ ಹೇಳದ ಆತ್ಮ, ಯಾರೊಂದಿಗೂ ಮಾತನಾಡದ ಆತ್ಮ, ನಿನ್ನೊಬ್ಬನ ಹತ್ತಿರ ಮಾತನಾಡುವುದೇನು?**

**ಸೃಷ್ಟಿ ಆದಿಯಿಂದ ಯಾರೂ 'ಆತ್ಮ ನನ್ನೊಂದಿಗೆ ಮಾತನಾಡಿದೆ' ಎಂದು ಹೇಳಲಿಲ್ಲ. ಅಂತದ್ದು ನಿನ್ನೊಂದಿಗೆ ಮಾತನಾಡಿದೆ ಎಂದರೇ ನಾವು ನಂಬಬೇಕಾ? ನಿನ್ನೊಂದಿಗೆ ಆತ್ಮ ಮಾತನಾಡಿದೆಯೆನ್ನುವುದಕ್ಕೆ ಆಧಾರವೇನು ಇದೆ? ಹೇಳುತ್ತೀರಾ?**

**ಉತ್ತರ :-** ಗತ ಚರಿತ್ರೆಯಲ್ಲಿ ಆತ್ಮ ಮಾತನಾಡಿದ ಸಂದರ್ಭಗಳು ಇವೆ. ಆದರೆ ಅವರಿಗೆ ಆತ್ಮ ತಮ್ಮೊಂದಿಗೆ ಮಾತನಾಡಿದಂತೆ ಗುರುತಿಸದಿದ್ದಾರೆ. ಆದುದರಿಂದ ಆತ್ಮ ಮಾತನಾಡಿದ ವಿಷಯವನ್ನು ಯಾರೂ ಹೇಳಲಾರದೆ ಹೋಗಿದ್ದಾರೆ. ಅವರಿಗೆ ಅವರ ಶರೀರದಲ್ಲಿ ಆತ್ಮವೊಂದು ಇದೆಯೆಂಬ ವಿಷಯ ಸಹ ತಿಳಿದಿಲ್ಲ. ಆತ್ಮವನ್ನು ಕುರಿತು ಜ್ಞಾನವನ್ನು ಮೂರು ಗ್ರಂಥಗಳಲ್ಲಿ ಹೇಳಲಾಗಿದೆ. ಆದರೂ ಅದು ಆತ್ಮಕ್ಕೆ ಸಂಬಂಧಿಸಿದ ಜ್ಞಾನವೆಂದು ಮೂರು ಮತದವರು ಗ್ರಹಿಸದಂತಿದ್ದಾರೆ. ಆದುದರಿಂದ ಆತ್ಮದ ಪ್ರಸ್ಥಾವನೆ ಇಲ್ಲಿಯವರೆಗೂ ಎಲ್ಲಿಯೂ ಬರಲಿಲ್ಲ. ಆತ್ಮ ವಿಷಯ ಜ್ಞಾನ ನಮ್ಮಿಂದಲೆ ಬಹಿರಂಗವಾಗುತ್ತಿದೆ. ಆದುದರಿಂದ ಮೊದಲು ನಡೆದಿರುವುದೇ ನಂತರ ಆಧಾರವಾಗುತ್ತದೆ. ಈಗ ನಾವು ಹೇಳುವುದು ನಂತರ ಕಾಲದಲ್ಲಿ ಆಧಾರವಾಗುತ್ತದೆ ಹೊರತು, ಈಗ ನಾವು ಹೇಳಿರುವುದಕ್ಕೆ ಮೊದಲು ನಡೆದ ಆಧಾರ ಏನು ಇಲ್ಲ.

ಮೂರು ಆತ್ಮಗಳು ಎಲ್ಲರಲ್ಲಿದ್ದರೂ ತಾವು ಯಾವ ಆತ್ಮ ಆಗಿರುವುದು, ಯಾವ ಆತ್ಮ ಮಾತನಾಡುತ್ತದೆ, ಯಾವ ಆತ್ಮ ಮಾತನಾಡುವುದಿಲ್ಲ ಎಂಬ ವಿಷಯ ಯಾರಿಗೂ ತಿಳಿದಿಲ್ಲ. ಈದಿನ ಸಂಪೂರ್ಣ ಜ್ಞಾನಿಗಳೆಂದು ಅಂದುಕೊಳ್ಳುವವರು ಸಹ ಮೂರು ಆತ್ಮಗಳ ವಿಷಯವನ್ನು ತಿಳಿಯದಿರುವುದರಿಂದ ಮಧ್ಯಾತ್ಮ ವಿಷಯ ಪೂರ್ತಿಯಾಗಿ ತಿಳಿಯದಂತೆ ಹೋಗಿದೆ, ಮಧ್ಯಾತ್ಮ ಒಂದಿದೆಯೆಂಬ ಜ್ಞಾನವೇ ತಿಳಿಯದಂತೆಹೋಗಿದೆ. ಅಂತಹ ಸಂದರ್ಭಗಳಲ್ಲಿ ನಾವು ಮಧ್ಯಾತ್ಮ ಮಾತನಾಡಿದೆಯೆಂದು ಹೇಳಿದರೇ 'ಅದು ಹೇಗೆ?' ಎಂದು ಕೇಳಬಲ್ಲರು. ಇತರರಿಗೆ ತಿಳಿದರೂ ತಿಳಿಯದಿದ್ದರೂ ಎಲ್ಲರೊಂದಿಗೆ ಮಧ್ಯಾತ್ಮ ಮಾತನಾಡುತ್ತಿದೆ, ಕೇಳಿದವರಿಗೆ ಎಷ್ಟು ಜ್ಞಾನವನ್ನಾದರೂ ಹೇಳಬಲ್ಲದು. ನನಗೆ ಮಧ್ಯಾತ್ಮ ಇಂತಹದೆಂದು ತಿಳಿದು ನನ್ನ ಸಂಶಯವನ್ನು ಕೇಳಿದ್ದೇನೆ. ಅದಕ್ಕೆ

ಆತ್ಮ ಹೇಳಿದ ಉತ್ತರವನ್ನೇ ಬರೆಯುತ್ತಿದ್ದೇನೆ. **ಎಂತಹ ರಹಸ್ಯವನ್ನಾದರೂ ಆತ್ಮ ಹೊರತುಪಡಿಸಿ ಯಾರೂ ಹೇಳಲಾರರು.**

ಈ ದಿನ ಪ್ರಪಂಚದಲ್ಲಿ ಯೇಸು ಮರಣ ಮುಸ್ಲಿಮ್ ಮತ್ತು ಕ್ರೈಸ್ತರ ಮಧ್ಯೆ ವಾದೋಪವಾದನೆಗಳಾಗಿ ಬದಲಾದ ವಿಷಯ ಎಲ್ಲರಿಗೂ ತಿಳಿದಿದೆ. ಅವರಿಬ್ಬರಿಗೂ ತಿಳಿಯದ ರಹಸ್ಯವನ್ನು ನಾನು ಆತ್ಮದ ಮೂಲಕ ತಿಳಿಯಲ್ಪಟ್ಟಿದ್ದೇನೆ. ಅವರ ವಾದನೆಗಳಿಗೆ ಸ್ವಲ್ಪ ಭಿನ್ನವಾಗಿದ್ದರೂ ನಮ್ಮ ವಾದನೆ ಸಹ ಕೇಳಿರೆಂದು ಕೋರುತ್ತಿದ್ದೇನೆ. ಯೇಸು ಒಬ್ಬ ಮತ ಪ್ರವಕ್ತನಾಗಿ ಹೇಳಲ್ಪಟ್ಟರೂ, ಆತನು ಮತ ಪ್ರವಕ್ತನಲ್ಲ. ಆತನ ದೃಷ್ಟಿಯಲ್ಲಿ ಮತಯೆನ್ನುವುದೇ ಇಲ್ಲ. ಯೇಸು ಪ್ರತಿ ಮನುಷ್ಯನಿಗು ಅಗತ್ಯವಾದ ಜ್ಞಾನವನ್ನು ಹೇಳಿದ್ದಾನೆ ಹೊರತು, ಪ್ರತ್ಯೇಕಿಸಿ ಒಂದು ಮತವನ್ನು ಕುರಿತು ಹೇಳಲಿಲ್ಲ. ಆತನ ಜೀವನ ಮೂರು ಭಾಗಗಳಾಗಿ ಇದ್ದರೂ, ಅದನ್ನು ತಿಳಿಯಲಾರದ ಮನುಷ್ಯರು ಆತನ ಜ್ಞಾನ ಗ್ರಂಥರೂಪದಲ್ಲಿ ಸಹ ಮೂರು ಭಾಗಗಳಾಗಿ ಇದೆಯೆಂದು ತಿಳಿಯಲಾರದಂತಿದ್ದಾರೆ. ಪರಿಶುದ್ಧ ಬೈಬಲ್ ಗ್ರಂಥದಲ್ಲಿ ಯೇಸು ಹೇಳಿದ ಜ್ಞಾನ ಇದೆಯೆಂದು ಹೇಳುವ ಕ್ರೈಸ್ತರು ಬೈಬಲ್ ಗ್ರಂಥದಲ್ಲಿನ ಬೋಧನೆಗಳು ಹಳೆಯ, ಹೊಸ ಒಡಂಬಡಿಕೆಗಳು ಎಂಬ ಎರಡು ಭಾಗಗಳು ಮಾತ್ರ ಹೇಳುತ್ತಿದ್ದಾರೆ. ಆದರೆ ಸುವಾರ್ತೆಗಳನ್ನು ಮೂರು ಭಾಗಗಳಾಗಿ ಆ ಗ್ರಂಥವನ್ನು ಯಾರೂ ವಿಭಜಿಸಿ ನೋಡಲಿಲ್ಲ. ಯೇಸು ಜೀವನವನ್ನು ಮೂರು ಭಾಗಗಳಾಗಿ ವಿಭಜಿಸಿ ನೋಡಲಾರದ ಮನುಷ್ಯರು, ಹಾಗೆಯೇ ಬೈಬಲ್ ಗ್ರಂಥವನ್ನು ಸಹ ಮೂರು ಭಾಗಗಳಾಗಿ ವಿಭಜಿಸಿ ನೋಡಲಾರದೆ ಹೋಗಿದ್ದಾರೆನ್ನುವುದು ಸತ್ಯ.

ಬೈಬಲ್ ಗ್ರಂಥ ಪೂರ್ತಿ ಅರವತ್ತಾರು (66) ಪಾಠಗಳಾಗಿರುವ ವಿಷಯ ಎಲ್ಲರಿಗೂ ತಿಳಿದಿದೆ. ಅದರಲ್ಲಿ 39 ಪಾಠಗಳು ಹಳೆ ಒಡಂಬಡಿಕೆಯ ಗ್ರಂಥವಾಗಿ ಹೇಳುತ್ತಿರುವಾಗ, 27 ಪಾಠಗಳು ಹೊಸ ಒಡಂಬಡಿಕೆ ಗ್ರಂಥವಾಗಿ ಹೇಳಲಾಗುತ್ತಿದೆ. ಈ ವಿಧವಾಗಿ ಬೈಬಲ್ ಗ್ರಂಥ ಹಳೆಯ, ಹೊಸದು ಎರಡು ವಿಧಗಳಾಗಿ ವಿಭಜಿಸಿ ಹೇಳಲಾಗುತ್ತಿದೆ.  ಆದರೆ ಇಲ್ಲಿ ಮುಖ್ಯವಾಗಿ

ಗಮನಿಸಬೇಕಾದ ವಿಷಯವೇನೆಂದರೇ ಹೊಸ ಒಡಂಬಡಿಕೆಯಲ್ಲಿರುವ 27 ಪಾಠಗಳಲ್ಲಿ ಮೊದಲ ನಾಲ್ಕು ಪಾಠಗಳು **'ಸುವಾರ್ತೆ'** ಎಂಬ ಪ್ರತ್ಯೇಕವಾದ ಹೆಸರು ಹೊಂದಿದ್ದು ಅವು ಯೇಸು ಜೀವನದಲ್ಲಿ ಮಾತ್ರ ಹೇಳಲ್ಪಟ್ಟ ಜ್ಞಾನವನ್ನು ಬೋಧಿಸುತ್ತಿವೆ. ಆದುದರಿಂದ ಹೊಸ ಒಡಂಬಡಿಕೆಯಲ್ಲಿನ 27 ಪಾಠಗಳಲ್ಲಿ ನಾಲ್ಕು ಪಾಠಗಳನ್ನು ಪ್ರತ್ಯೇಕವಾಗಿ ವಿಭಜಿಸಬೇಕಾಗಿ ಬಂದಿದೆ. ಈ ನಾಲಕ್ಕೂ **"ಸುವಾರ್ತೆಗಳು"** ಎಂಬ ಪ್ರತ್ಯೇಕವಾದ ಹೆಸರು ಹೊಂದಿವೆ. ಸುವಾರ್ತೆಗಳೆಂಬ ನಾಲ್ಕು ಪಾಠಗಳಲ್ಲಿ ಯೇಸು ಸ್ವತಃವಾಗಿ ಮಾತನಾಡಿ ಹೇಳಿದ ಬೋಧನೆಗಳು ಮಾತ್ರವೇ ಇವೆ. ಉಳಿದ 23 ಪಾಠಗಳಾಗಲಿ, ಹಳೆ ಒಡಂಬಡಿಕೆಯಲ್ಲಿನ 39 ಪಾಠಗಳಾಗಲಿ ಒಟ್ಟು 62 ಪಾಠಗಳಿಗೆ ಸುವಾರ್ತೆಗಳೆಂಬ ಹೆಸರು ಇಲ್ಲವೆಂದು ಗ್ರಹಿಸಬೇಕು. 62 ಬೈಬಲ್ ಪಾಠಗಳಲ್ಲಿ ದೇವರ ಜ್ಞಾನವೇ ಇದ್ದರೂ ಅದು ಮನುಷ್ಯರಿಂದಾಗಲಿ, ದೇವದೂತರಿಂದಾಗಲಿ ಹೇಳಲ್ಪಟ್ಟ ಜ್ಞಾನವಾಗಿದೆ. ಕೇವಲ ನಾಲ್ಕು ಸುವಾರ್ತೆಗಳ ಪಾಠಗಳಲ್ಲಿ ಮಾತ್ರವೇ ಸ್ವತಃವಾಗಿ ಯೇಸು ಹೇಳಿದ ಮಾತುಗಳು ಇವೆ. ಯೇಸು ಸಾಧಾರಣ ಮನುಷ್ಯನಂತೆ ಕಾಣಿಸಿದರೂ ಆತನು ಸಾಧಾರಣ ವ್ಯಕ್ತಿಯಲ್ಲ. ಆತನು ಪ್ರತ್ಯೇಕವಾದ ಮನುಷ್ಯನಾಗಿರುವುದರಿಂದ, ಆತನು ಹೇಳಿದ ಬೋಧನೆಗಳಾಗಿರುವ ನಾಲ್ಕು ಪಾಠಗಳಿಗೆ ನಾಲ್ಕು ಸುವಾರ್ತೆ ಗಳೆಂದು ಹೇಳುವುದಾಗಿದೆ. ನಾಲ್ಕು ಸುವಾರ್ತೆಗಳು ಪ್ರತ್ಯೇಕವಾಗಿ ಇರುವುದರಿಂದ ಆ ನಾಲ್ಕು ಸುವಾರ್ತೆಗಳಲ್ಲಿರುವ ಜ್ಞಾನ ಪ್ರತ್ಯೇಕವಾದುದೆಂದು ಹೇಳದೇನೇ ತಿಳಿಯುತ್ತದೆ.

ಬೈಬಲ್ ಗ್ರಂಥವನ್ನು ಚೆನ್ನಾಗಿ ಗ್ರಹಿಸಿದರೆ ಅದರಲ್ಲಿ ಹಳೆ ಒಡಂಬಡಿಕೆ ಯಾಗಿ 39 ಪಾಠಗಳಿರುವಾಗ, ಹೊಸ ಒಡಂಬಡಿಕೆ 27 ಪಾಠಗಳಾಗಿದೆ. ಹೊಸ ಒಡಂಬಡಿಕೆಯ ಮೊದಲಿನಲ್ಲಿಯೇ ನಾಲ್ಕು ಸುವಾರ್ತೆಗಳು ಇರುವು ದರಿಂದ ಅದು ಪ್ರತ್ಯೇಕವಾದವುಗಳಾಗಿ ಹೇಳಲ್ಪಡುತ್ತಿವೆ. 39 ಹಳೆ ಒಡಂಬಡಿಕೆಯ ಪಾಠಗಳ ನಂತರ 40, 41, 42, 43 ಎಂದು ಕ್ರಮವಾಗಿ ನಾಲ್ಕು ಸುವಾರ್ತೆಗಳು ಇವೆ. ಹಳೆ ಒಡಂಬಡಿಕೆಯ ನಂತರ ನಾಲ್ಕು ಸುವಾರ್ತೆಗಳನ್ನು ಒಂದು ಭಾಗವಾಗಿ

ಗುರುತಿಸಲ್ಪಟ್ಟರೆ ಹೊಸ ಒಡಂಬಡಿಕೆಯಲ್ಲಿನ ಉಳಿದ 23 ಪಾಠಗಳು ಮೂರು ಭಾಗಗಳಾಗಿ ಗುರುತಿಸಲ್ಪಡುತ್ತವೆ. ಬೈಬಲ್ ಗ್ರಂಥ ಸಹಜವಾಗಿಯೇ ಎರಡು ಭಾಗಗಳಾಗಿರು ವಾಗ ಅದರಲ್ಲಿ ಗುರುತಿಸಿದರೆ ಮೂರನೆ ಭಾಗವೂ ಸಹ ಇದೆ. ಅದೇ ವಿಧವಾಗಿಯೇ ಯೇಸು ಜೀವನ ಸಹಜವಾಗಿ ಎರಡು ಭಾಗಗಳಾಗಿ ಕಾಣಿಸುತ್ತಿದೆ. ಆದರೆ ಆತನ ಜೀವನವನ್ನು ಚೆನ್ನಾಗಿ ಪರಿಶೀಲಿಸಿದರೆ ಮೂರು ಭಾಗಗಳಾಗಿ ಕಾಣಿಸುತ್ತಿದೆ.

ಹುಟ್ಟಿದಾಗಿನಿಂದ ಆತನಿಗೆ 30 ವರ್ಷಗಳ ವಯಸ್ಸು ಬರುವವರೆಗು ಒಂದು ಜೀವನದ ಭಾಗವಾಗಿ, ನಂತರ ಮೂರು ವರ್ಷಗಳ ಜೀವನವನ್ನು ಮತ್ತೊಂದು ಭಾಗವಾಗಿ, ಆ ಮೂರು ವರ್ಷಗಳ ಜೀವನದ ನಂತರ ಕಳೆದ ಜೀವನವನ್ನು ಮೂರನೆ ಜೀವನದ ಭಾಗವಾಗಿ ಹೇಳಬಹುದು. ಆದರೆ ಮೂರನೆ ಜೀವನದ ಭಾಗವು ಯೇಸುಗೆ ಇಲ್ಲವೆಂದು ಎಲ್ಲರೂ ಹೇಳಿಕೊಳ್ಳುವುದು ನಡೆಯುತ್ತಿದೆ. ಈಗ ನಾವು ಮಾತ್ರ ಮೂರನೆ ಜೀವನದ ಬಗ್ಗೆ ಹೇಳಿದರೂ ಯಾರೂ ನಂಬುವ ಸ್ಥಿತಿಯಲ್ಲಿ ಇಲ್ಲವೆಂದು ನಮಗೆ ಚೆನ್ನಾಗಿ ತಿಳಿದಿದೆ. ಆದರೂ ಅದು ಸತ್ಯವಾದ್ದರಿಂದ ಇತರರ ನಂಬಿಕೆ ಮೇಲೆ ಆಧಾರಬೀಳದೆ, ನಮಗೆ ತಿಳಿದ ಸತ್ಯವನ್ನು ತಿಳಿಸುತ್ತಿದ್ದೇವೆ. ಯೇಸು ಹುಟ್ಟಿದಾಗಿನಿಂದ 30 ವರ್ಷಗಳು ಕಳೆಯುವವರೆಗು ಯಾವುದೇ ಜ್ಞಾನಬೋಧನೆಗಳು ಹೇಳದಂತೆ, ತಾನು ಜ್ಞಾನಿಯೆಂದು ಹೊರಗೆ ತಿಳಿಯದಂತೆ ಬದುಕಿದ್ದಾನೆ. ತಾಯಿ ತಂದೆ ಹತ್ತಿರ, ಅಣ್ಣತಮ್ಮಂದಿರ ಹತ್ತಿರ 30 ವರ್ಷಗಳ ವಯಸ್ಸು ಬರುವವರೆಗು ಬದುಕಿದ ಜೀವನವನ್ನು ಆತನ ಮೊದಲ ಜೀವನದ ಭಾಗವೆಂದು ಹೇಳಬಹುದು. ಆ ಜೀವನದಲ್ಲಿ ಸಾಧಾರಣ ಮನುಷ್ಯನಂತೆ ಯೇಸು ಜೀವಿಸುವುದು ನಡೆದಿದೆ. ಆತನ ಮೊದಲ ಜೀವನದಲ್ಲಿ ಆತನು ಪ್ರಜೆಗಳಿಗೆ ಯಾರಿಗೂ ತಿಳಿಯಲ್ಪಡಲಿಲ್ಲ. 30 ವರ್ಷಗಳು ಸಾಧಾರಣ ಜೀವನ ಕಳೆದ ಯೇಸು ಯಾವಾಗಲೂ ತನ್ನ ಮೊದಲನೆ ಭಾಗದ ಜೀವನದಲ್ಲಿ ದೇವರಜ್ಞಾನವನ್ನು ಕುರಿತು ಹೇಳಲಿಲ್ಲ.

ಯೇಸು ತನ್ನ ಮೊದಲ ಜೀವನ 30 ವರ್ಷಗಳು ಕಳೆದ ನಂತರ ಆರಂಭ ಮಾಡಿದ ಮೂರು ವರ್ಷಗಳ ಜೀವನದಲ್ಲಿ ಪ್ರಜೆಗಳ ಮಧ್ಯದೊಳಗೆ ಹೋಗಿ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಪ್ರಜೆಗಳಲ್ಲಿ ಆತನು ಮಹೋನ್ನತ ವ್ಯಕ್ತಿಯಾಗಿ ಈದಿನ ಹೆಸರುವಾಸಿಯಾದರೂ, ಆದಿನ ಮೂರು ವರ್ಷಗಳಲ್ಲಿ ದುರ್ಭರ ಜೀವನವನ್ನು ಕಳೆದಿದ್ದಾನೆಂದೇ ಹೇಳಬಹುದು. ತನ್ನ ಮೊದಲ 30 ವರ್ಷಗಳ ಜೀವನಕ್ಕಿಂತ ಮೂರು ವರ್ಷಗಳು ಕಷ್ಟಜೀವನವನ್ನು ಕಳೆದಿದ್ದಾನೆ. ತನ್ನದೆನ್ನುವುದು ಏನು ಇಲ್ಲದಂತೆ, ಬದಲಾಯಿಸಿಕೊಳ್ಳುವುದಕ್ಕೆ ಎರಡನೆ ಅಂಗಿ ಸಹ ಇಲ್ಲದಂತೆ ಆತನು ತನ್ನ ಜೀವನವನ್ನು ಕಳೆದಿದ್ದಾನೆ. ಆದರೂ ಆ ಮೂರು ವರ್ಷಗಳು ತನ್ನ ಜ್ಞಾನವನ್ನು ಪ್ರಜೆಗಳಿಗೆ ಬೋಧಿಸಿದ್ದಾನೆ, ಆದಿನ ಆತನು (ಯೇಸು) ಹನ್ನೆರಡು ಜನ ಶಿಷ್ಯರನ್ನು ಏರ್ಪಡಿಸಿಕೊಂಡರೂ, ಕೊನೆಗೆ ಆತನ ಹತ್ತಿರ ಉಳಿದಿರುವುದು ಹನ್ನೊಂದು ಜನ ಶಿಷ್ಯರು ಮಾತ್ರವೇ. ಯೇಸು ಮೂರು ವರ್ಷಗಳಲ್ಲಿ ಹೇಳಿದ ಬೋಧನೆಗಳನ್ನು ಆತನು ಅಲ್ಲಿಂದ ಇಲ್ಲದಂತೆ ಹೋದನಂತರ ನಾಲ್ಕುಜನ ವ್ಯಕ್ತಿಗಳು ಯೇಸು ಬೋಧನೆಗಳನ್ನು ಗ್ರಂಥರೂಪವಾಗಿ ಬರೆದಿದ್ದಾರೆ. ಹಾಗೆ ಬರೆದಿರುವವೇ ನಾಲ್ಕು ಸುವಾರ್ತೆಗಳೆಂಬ ಹೆಸರಿನಿಂದ ನಮ್ಮಮುಂದಿವೆ. ಆತನು ಜ್ಞಾನ ಬೋಧನೆ ಹೇಳುವಾಗ ಸಮೀಪದಲ್ಲಿರುವ ಆತನ ಶಿಷ್ಯರಲ್ಲಿ ನಾಲ್ಕು ಜನ ಅವರು ಕೇಳಿರುವುದನ್ನು, ನೋಡಿರುವುದನ್ನು ಬರೆದಿದ್ದಾರೆಂದು ನಾವು ಅಂದುಕೊಳ್ಳಬಹುದು. ಹೇಗಾದರೇನು ಆತನ ಬೋಧನೆಗಳು ನಾಲ್ಕು ಸುವಾರ್ತೆಗಳ ರೂಪವಾಗಿ ನಮಗೆ ತಿಳಿದಿರುವುದಕ್ಕೆ ಸಂತೋಷಿಸಬೇಕು.

ಯೇಸು ಅಪರಿಚಿತನಾಗಿ ಕಳೆದ 30 ವರ್ಷಗಳು, ನಂತರ ಸುಪರಿಚಿತ ನಾಗಿ ಕಳೆದ ಮೂರು ವರ್ಷಗಳು ಒಟ್ಟು 33 ವರ್ಷಗಳು ಕಳೆದ ನಂತರ ಯೇಸು ಜೀವನದಲ್ಲಿ ಒಂದು ಸಂಘಟನೆ ನಡೆದಿದೆ. ಆತನ ಶತ್ರುಗಳು ಆತನನ್ನು ಸಾಯಿಸಬೇಕೆಂದುಕೊಂಡಿದ್ದಾರೆ. ಅದರಲ್ಲಿನ ಭಾಗವಾಗಿಯೇ ಆತನಿಗೆ ಪಿಲಾತ್ ರಾಜನ ಹತ್ತಿರ ಮರಣ ಶಿಕ್ಷೆ ಖರಾರು ಮಾಡಲಾಗುತ್ತದೆ. ಶಿಲುಬೆ ಮೇಲೆ ನೇತಾಕಿ ಸಾಯಿಸುವಂತೆ ತೀರ್ಪು ಮಾಡಲಾಗುತ್ತದೆ. ಆ ವಿಧವಾಗಿಯೇ

ಯೇಸುನನ್ನು ಶಿಲುಬೆಗೆ ಏರಿಸುವುದು, ಆತನು ಮರಣಿಸಿದಾಗ ಮೃತ ದೇಹವನ್ನು ಆಗಿನ ಆತನ ಭಕ್ತರು ಸಮಾಧಿ ಮಾಡುವುದು ನಡೆದಿದೆ. ಶುಕ್ರವಾರ ಆತನು ಶಿಲುಬೆ ಮೇಲೆ ಮರಣಿಸಿದಾಗ ಆ ದಿನ ಸಾಯಂಕಾಲ ಆತನನ್ನು ಸಮಾಧಿ ಮಾಡುವುದು ನಡೆದಾಗ, ಭಾನುವಾರ ಬೆಳಗಾಗದ ಮುನ್ನವೇ ಪುನಃ ಆತನು ಸಜೀವನಾಗಿ ಸಮಾಧಿಯಿಂದ ಹೊರಗೆ ಬಂದು ತನ್ನ ಶಿಷ್ಯರಿಗೆ ಕಾಣಿಸುವುದು ನಡೆದಿದೆ. ಆ ದಿನ ಪ್ರತ್ಯಕ್ಷ ಸಾಕ್ಷಿಗಳಾಗಿ ನೋಡಿದವರಿಗೆ ಅದು ನಡೆದಿರುವುದೆಲ್ಲಾ ಸತ್ಯವೇ. ಆದುದರಿಂದ ಈದಿನ ಪ್ರಪಂಚದಲ್ಲಿ ಅತ್ಯಧಿಕವಾಗಿರುವ ಕ್ರೈಸ್ತರು ಎಲ್ಲರೂ ಮುಕ್ತಕಂಠದಿಂದ ಯೇಸು ಮರಣವನ್ನು ಜಯಿಸಿ ಪುನಃ ಸಜೀವನಾಗಿ ಬಂದಿರುವ ದೇವರೆಂದು ಹೇಳುತ್ತಿದ್ದಾರೆ. ಈ ಮಾತು ಹೆಚ್ಚಾಗಿ ಪ್ರಜೆಗಳನ್ನು ಆಕರ್ಷಿಸುವಂತೆ ಇರುವುದರಿಂದ ಕ್ರೈಸ್ತ ಮತದ ನಂತರ ಎರಡನೆ ಸ್ಥಾನದಲ್ಲಿರುವ ಮುಸ್ಲಿಮ್ ಮತದವರು ಅದನ್ನು ಅಸತ್ಯವೆಂದು ವಾದಿಸತೊಡಗಿದ್ದಾರೆ. ಹಾಗೆ ವಾದಿಸುವುದರಲ್ಲಿ ಅವರ ಮುಖ್ಯ ಉದ್ದೇಶ ಅಲ್ಲಾಹ್ ಹೊರತು ಪ್ರಪಂಚದಲ್ಲಿ ಇತರ ದೇವರು ಇಲ್ಲವೆಂದು, ಇರುವುದು ಒಬ್ಬನೇ ದೇವರೆಂದು, ಆತನೆ 'ಅಲ್ಲಾಹ್' ಎಂದು ಅವರ ಪ್ರಗಾಢ ವಿಶ್ವಾಸ.

'ದೇವರು' ಎಂಬ ವಿಷಯದಲ್ಲಿ ಇತರೆ ದೇವರನ್ನು ಒಪ್ಪಿಕೊಳ್ಳದಿರುವುದು ಮುಸ್ಲಿಮ್‌ರದು ಒಳ್ಳೆಯ ಲಕ್ಷಣವೇ ಆಗಿರುವುದರಿಂದ ಅವರ ವಾದನೆಯಲ್ಲಿ 'ಯೇಸು ಮರಣಿಸಲಿಲ್ಲವೆಂದು, ಪುನಃ ಸಜೀವವಾಗಿ ಏಳಲಿಲ್ಲವೆಂದು 'ಹೇಳುವುದು ಅವರ ಕೆಲಸವಾಗಿದೆ. ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆಂಬ ಮಾತು ಅಕ್ಷರಸಃ ಸತ್ಯವೆಂದು ಕ್ರೈಸ್ತ ಬೋಧಕರು ಹೇಳುತ್ತಿರುವಾಗ, ಯೇಸು ಮೊದಲಿಗೇ ಮರಣಿಸಲಿಲ್ಲವೆಂದು ಮುಸ್ಲಿಮ್ ಬೋಧಕರು ಹೇಳುತ್ತಿದ್ದಾರೆ. ಅವರವರ ವಾದನೆಗಳಲ್ಲಿ ಅವರವರ ದೇವರೇ ದೊಡ್ಡವನೆಂದು ಹೇಳಿಕೊಳ್ಳುವುದು ಪ್ರಧಾನಾಂಶವಾಗಿ ಇರುವುದರಿಂದ ಅದೇ ಉದ್ದೇಶದಿಂದ ಅವರವರ ವಾದನೆಗಳನ್ನು ಹೇಳುತ್ತಿದ್ದಾರೆ. ಪ್ರಪಂಚಕ್ಕೆಲ್ಲಾ ದೇವರು ಒಬ್ಬನೇ ಎಂಬ ಮಾತು ಸರಿಯಾದುದೇ ಎಂದು ನಾನು ಸಹ ಹೇಳುತ್ತಿದ್ದೇನೆ. ಆದರೆ ಆದಿನ ಕ್ರೈಸ್ತರು ಶಿಲುಬೆ ಮೇಲೆ ಯೇಸು ಮರಣಿಸಿರುವುದು ನೋಡಿದ ಮಾತು ನಿಜವೇಯೆಂದು

ಒಂದುಕಡೆ ಹೇಳುತ್ತಲೇ, ದೇವರು ಒಬ್ಬನೇ ಎನ್ನುವುದನ್ನು ಕುರಿತು ಮುಸ್ಲಿಮ್‌ರು ವಾದಿಸುವ ವಾದನೆ ಸಹ ಸರಿಯಾದುದೇ ಎಂದು ಹೇಳುತ್ತಿದ್ದೇನೆ.

**ಪ್ರಶ್ನೆ :- ನೀವು ಹೇಳುವ ಮಾತುಗಳನ್ನು ನೋಡಿದರೆ ಇತ್ತ ಕ್ರೈಸ್ತರನ್ನು, ಅತ್ತ ಮುಸ್ಲಿಮ್‌ರನ್ನು ಸಂದಿಗ್ಧದಲ್ಲಿ ಹಾಕುತ್ತಿದ್ದೀರ. ಕ್ರೈಸ್ತರು ಹೇಳುವಮಾತನ್ನು ನೀವು ಸತ್ಯವೇ ಎಂದಾಗ, ಅವರು ನೋಡಿರುವುದು ಸತ್ಯವೇ ಎಂದಾಗ, ನಾನು ನಿಮ್ಮನ್ನು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ನೀವು ನೇರವಾಗಿಯೇ ಸಮಾಧಾನ ಹೇಳಿರಿ. ಒಂದು ಸಲ ಮರಣಿಸಿದ ವ್ಯಕ್ತಿ ಯಾರಾದರೂ ಪುನಃ ಅದೇ ಶರೀರದಲ್ಲಿ ಬದುಕುವುದಕ್ಕೆ ಅವಕಾಶವಿದೆಯಾ? ನೀವು ನಿಮ್ಮ ಜ್ಞಾನ ಬೋಧನೆಗಳಲ್ಲಿ ಒಂದು ಸಲ ಶರೀರವನ್ನು ಬಿಟ್ಟ ನಂತರ, ಪೂರ್ತಿಯಾಗಿ ಮರಣವನ್ನು ಹೊಂದಿದ ನಂತರ, ಆತನು (ಆ ಜೀವಿಯು) ಆ ಶರೀರದಲ್ಲಿ ಪ್ರವೇಶಿಸುವುದಕ್ಕೆ ಸಾಧ್ಯವಿಲ್ಲವೆಂದು ಹೇಳಿದ್ದಾರೆ. ನಿಮ್ಮ ಮಾತಿನ ಪ್ರಕಾರ ಯೇಸು ಬದುಕಿದ್ದಾನೆನ್ನುವುದು ಸತ್ಯವಾಗುತ್ತದಾ?**

**ಉತ್ತರ :-** ಸೃಷ್ಟಿ ಆದಿಯಲ್ಲಿ ಯಾವ ಧರ್ಮ ಹೇಳಲ್ಪಟ್ಟಿದೆಯೋ ಅದೇ ಧರ್ಮ ಎಂದಿಗೂ ಇರುತ್ತದೆ. ದೇವರು ಬದಲಾಗುವುದಿಲ್ಲ, ಧರ್ಮ ಬದಲಾಗುವುದಿಲ್ಲ. ಕಾಲಾನುಗುಣವಾಗಾಗಲಿ, ಪರಿಸ್ಥಿತಿಗಳನ್ನು ಅನುಸರಿಸಿ ಬದಲಾಗುವಂತದ್ದು ಧರ್ಮವಲ್ಲ. ಒಂದೊಂದು ದೇಶದಲ್ಲಿ ಒಂದೊಂದು ನ್ಯಾಯ, ಒಂದೊಂದು ನೀತಿ ಇರುತ್ತದೆ ಆದರೆ, ಧರ್ಮ ಮಾತ್ರ ಭೂಮಂಡಲಕ್ಕೆಲ್ಲ ಒಂದೇ ಇರುತ್ತದೆ. ಒಂದು ಕ್ರಿಯೆ ಒಂದು ದೇಶದಲ್ಲಿ ನ್ಯಾಯ ಸಮ್ಮತವಾದರೆ, ಅದೇ ಕ್ರಿಯೆ ಮತ್ತೊಂದು ದೇಶದಲ್ಲಿ ನ್ಯಾಯ ಸಮ್ಮತವಲ್ಲದ್ದಾಗಿ, ಶಿಕ್ಷಾರ್ಹವಾಗಿರುತ್ತದೆ. ದೇವರ ಧರ್ಮಗಳಲ್ಲಿ ಅಂತದ್ದು ಯಾವುದೂ ಇಲ್ಲ. ಧರ್ಮ ಎಲ್ಲಿಯಾದರೂ ಧರ್ಮವೇ, ಅಧರ್ಮ ಎಲ್ಲಿಯಾದರೂ ಅಧರ್ಮವೇ. ಇದೇ ಸಿದ್ಧಾಂತವನ್ನು ಅನುಸರಿಸಿ ನಾವು ಹೇಳಿದ ಜ್ಞಾನವೆಲ್ಲವೂ ಇದೆ. 'ಒಂದು ಸಲ ಮರಣಿಸಿ ಶರೀರವನ್ನು ಬಿಟ್ಟ ಜೀವಿಯು ಪುನಃ ಆ ಶರೀರವನ್ನು ಸೇರುವುದಕ್ಕೆ ಸಾಧ್ಯವಿಲ್ಲ ಎನ್ನುವುದು ಧರ್ಮಸಮ್ಮತವಾದ ಮಾತು. ಇನ್ನು

ಹೇಳಬೇಕೆಂದರೇ ಶಾಸ್ತ್ರಸಮ್ಮತವಾದ ಮಾತು ಸಹ ಆಗುತ್ತದೆ. ಒಂದುವೇಳೆ ಎಲ್ಲಿಯಾದರೂ ಮರಣಿಸಿದರು ಶರೀರದೊಳಗೆ ಪುನಃ ಅದೇ ಜೀವಿಯು ಸೇರಿದ್ದಾನೆಂದರೇ ಅದು ಅಧರ್ಮವಾಗುತ್ತದೆ ಮತ್ತು ಅಶಾಸ್ತ್ರವಾಗುತ್ತದೆ. ನೀನು ಪ್ರಶ್ನೆ ನನ್ನನ್ನು ಕೇಳಿದ್ದೀಯಾ ಆದರೆ ನಿನ್ನ ಪ್ರಶ್ನೆಯಲ್ಲಿ ಲೋಪವಿದೆ, ನನ್ನ ಉತ್ತರದಲ್ಲಿ ಲೋಪವಿಲ್ಲ.

ಯೇಸುನನ್ನು ಶಿಲುಬೆ ಮೇಲೆ ಮರಣಿಸಿದಂತೆ ಆ ದಿನ ಆತನ ಭಕ್ತರೆಲ್ಲರೂ ನೋಡಿದ್ದಾರೆ. ಅದೇ ವಿಷಯವನ್ನೇ ಈದಿನ ಕ್ರೈಸ್ತರೆಲ್ಲರೂ ಹೇಳುತ್ತಿದ್ದಾರೆ. ಪುನಃ ಆತನು (ಯೇಸು) ಬದುಕಿ ಎದ್ದಿದ್ದಾನೆಂದು ಹೇಳುತ್ತಿದ್ದಾರೆ. ಅವರು ಹೇಳುವ ಮಾತುಗಳಲ್ಲಿ ಸತ್ಯವಿದೆಯಾ, ಅಸತ್ಯವಿದೆಯಾ ಎಂದು ಆಲೋಚಿಸಿದರೆ ಅವರಿಗೆ ತಿಳಿದಮಟ್ಟಿಗೆ ಅವರು ಹೇಳುವುದು ಸತ್ಯವೇ. ಆದರೆ ಅವರಿಗೆ ತಿಳಿಯದ ಅಸತ್ಯ ಅಲ್ಲಿ ಅಡಗಿದೆಯೆಂದು ಕ್ರೈಸ್ತರಿಗೆ ತಿಳಿದಿಲ್ಲ. ಯೇಸು ಮರಣಿಸಿದ್ದಾನೆಂದು ಅವರು ಹೇಳುವ ಮಾತು ಸ್ವಲ್ಪಮಟ್ಟಿಗೆ ಎಂದರೇ ಅವರಿಗೆ ತಿಳಿದಮಟ್ಟಿಗೆ ಸತ್ಯವೇ. ಅವರಿಗೆ ತಿಳಿಯದ ಅಸತ್ಯ ಸಹ ಅದರಲ್ಲಿದೆ. ಅಲ್ಲಿ ಆ ದಿನ ನಡೆದ ಸತ್ಯ ಏನೆಂದರೇ ಯೇಸು ಮೇಲ್ನೋಟಕ್ಕೆ ಮರಣಿಸಿದಂತೆ ಕಾಣಿಸಿದರೂ ಯೇಸು ನಿಜವಾಗಲೂ ಮರಣಿಸಲಿಲ್ಲ. ಮರಣಿಸದವನು ಪುನಃ ಏಳುವುದು ಎಲ್ಲಿಯಾದರೂ ನಡೆಯುವ ಕೆಲಸವೇಯೆಂದು ನಾವು ತಿಳಿಯಬೇಕು. ಯೇಸು ತನ್ನ ವಿಷಯದಲ್ಲಿ ಮನುಷ್ಯರು ತಪ್ಪಾಗಿ ತಿಳಿಯುವುದಕ್ಕೆ ಅವಕಾಶ ಇರುವುದರಿಂದ, ತನ್ನ ಜೀವನದಲ್ಲಿ ಒಂದೆರಡು ಕಡೆ ಮರಣಿಸಿದ್ದಾರೆಂದು ಕೊಂಡವರನ್ನು, ಎಲ್ಲರೂ ಮರಣಿಸಿದ್ದಾರೆಂದು ನಂಬಿ ಶವಗಳೆಂದುಕೊಂಡವರನ್ನು ಪುನಃ ಸಜೀವವಾಗಿ ಎಬ್ಬಿಸಿದ್ದಾನೆ. ಇದೆಲ್ಲವೂ ಬೈಬಲ್ ಗ್ರಂಥದಲ್ಲಿ ಅಲ್ಲಲ್ಲಿ ಇವೆ.

**(ಲೂಕಾ, 8–51, 56) ಎಲ್ಲರೂ ಆಕೆಗೋಸ್ಕರ ಅಳುತ್ತಾ ಎದೆ ಹೊಡೆದುಕೊಳ್ಳುತ್ತಿರುವಾಗ ಆತನು (ಯೇಸು) ಅವರೊಂದಿಗೆ "ಅಳಬೇಡ ಆಕೆ ನಿದ್ರಿಸುತ್ತಿದ್ದಾಳೆ ಹೊರತು ಮರಣಿಸಲಿಲ್ಲವೆಂದು ಹೇಳಿದನು. ಆಕೆ ಮರಣಿಸಿದ್ದಾಳೆಂದು**

**ಅವರು ತಿಳಿದು ಅವರು ಆತನನ್ನು ಅವಹೇಳನಮಾಡಿದರು. ಆದರೆ ಆತನು ಆಕೆಯ ಕೈ ಹಿಡಿದುಕೊಂಡು ಅಮ್ಮಣ್ಣೀ ಎದ್ದೇಳೆಂದು ಹೇಳುತ್ತಲೇ, ಆಕೆಯ ಪ್ರಾಣ ಪುನಃ ಬಂದಿತು ಆದ್ದರಿಂದ ತಕ್ಷಣ ಆಕೆ ಎದ್ದಳು. ಆಗ ಆತನು ಆಕೆಗೆ ಊಟಮಾಡಿಸಿರೆಂದು ಆಜ್ಞಾಪಿಸಿದನು."** ಇಂತದ್ದೆ ಮತ್ತೊಂದುಕಡೆ ಇದೆ. ಮರಣಿಸಿದ್ದಾನೆಂದುಕೊಂಡ ಮನುಷ್ಯನನ್ನು, ಸಮಾಧಿಯಲ್ಲಿಟ್ಟಿರುವ ಮನುಷ್ಯನನ್ನು ಯೇಸು ಪುನಃ ಸಜೀವವಾಗಿ ಎಬ್ಬಿಸಿದ್ದಾನೆ. ಅಲ್ಲಿ ಸಹ ಆತನು ಮರಣಿಸಲಿಲ್ಲ ವೆಂದು ನಿದ್ರಿಸುತ್ತಿದ್ದಾನೆಂದು ಹೇಳುವುದಾಗಿದೆ. ಈ ಸಂಘಟನೆಗಳನ್ನು ಚೆನ್ನಾಗಿ ವಿಶ್ಲೇಷಿಸಿ ನೋಡಿದರೆ ಇದರಲ್ಲಿ ನಮಗೆ ತಿಳಿಯದ  ಕೆಲವು ರಹಸ್ಯಗಳು ತಿಳಿಯಬಲ್ಲವು.  ಯಾರನ್ನಾದರೆ ಮರಣಿಸಿದ್ದಾರೆಂದುಕೊಂಡಿದ್ದಾರೋ ಆ ಬಾಲಕಿಯನ್ನು, ಲಾಜರ್ ಎಂಬ ವ್ಯಕ್ತಿಯನ್ನು ಮರಣಿಸಲಿಲ್ಲವೆಂದು ಯೇಸು ಹೇಳಿದ್ದಾನೆ. ಆದ್ದರಿಂದ ಸಾವಿನ ವಿಷಯದಲ್ಲಿ ನಾವು ಅನೇಕ ಸಂದರ್ಭಗಳಲ್ಲಿ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದೇವೆಂದು ಅರ್ಥವಾಗುತ್ತಿದೆ. ಮರಣಿಸದಿದ್ದರು ನಮಗೆ ತಿಳಿದಿರುವುದನ್ನನುಸರಿಸಿ ಮರಣಿಸಿದ್ದಾನೆಂದು ಅಂದುಕೊಳ್ಳುತ್ತಿದ್ದೇವೆ. ಯೇಸು ಬಾಲಕಿ ವಿಷಯದಲ್ಲಿ ಆಕೆ ಮರಣಿಸಲಿಲ್ಲ ಎಂದರೇ ಆತನನ್ನು ಅವಹೇಳನ ಮಾಡಿದ್ದಾರೆಂದು ಸಹ ಬರೆದಿದ್ದಾರೆ! ಈಗ ಶಿಲುಬೆ ಹಾಕಿದ ದಿನ ಯೇಸು ನಿಜವಾಗಲು ಮರಣಿಸಲಿಲ್ಲ ಎಂದರೇ ನೀವು ಸಹ ನನ್ನನ್ನು ಅವಹೇಳನ ಮಾಡಬಲ್ಲರು.

ಯೇಸು ಮರಣಿಸಿದ್ದರೆ ಧರ್ಮದ ಪ್ರಕಾರ ಆತನು ಪುನಃ ಏಳುವುದಕ್ಕೆ ಸಾಧ್ಯವಿಲ್ಲ. ಆತನು ಮರಣಿಸಲಿಲ್ಲ ಆದ್ದರಿಂದ ಆತನು ಪುನಃ ಎದ್ದಿದ್ದಾನೆ. ಬಾಲಕಿ ಮರಣಿಸಿದ್ದಾಳೆಂದು ಬಾಲಕಿಯನ್ನು ನೋಡಿದವರೆಲ್ಲರೂ ಅಂದು ಕೊಳ್ಳುವಂತೆ, ಆ ದಿನ ಯೇಸುನನ್ನು ನೋಡಿದವರೆಲ್ಲರೂ ಆತನು ಮರಣಿಸಿದ್ದಾ ನೆಂದು ತಪ್ಪಾಗಿ ತಿಳಿದಿದ್ದಾರೆ. ವಾಸ್ತವವಾಗಿ 'ಯೇಸು ಶಿಲುಬೆ ಮೇಲೆ ಮರಣಿಸಲಿಲ್ಲ' ಎಂಬ ಮಾತು ವಾಸ್ತವ. ಇದು ಕ್ರೈಸ್ತ ಲೋಕಕ್ಕೆ ತಿಳಿಯದ ರಹಸ್ಯ. ತನ್ನ ವಿಷಯದಲ್ಲಿ ತಪ್ಪಾಗದಂತಿರುವುದಕ್ಕೆ ಯೇಸು ಮೊದಲೇ ಮರಣಿಸಿದವರನ್ನು ಮರಣಿಸಲಿಲ್ಲವೆಂದು ಹೇಳಿ ಪುನಃ ಎಬ್ಬಿಸಿದರೂ, ಕೊನೆಗೆ

ಮನುಷ್ಯರೆಲ್ಲರೂ ಯೇಸು ಮರಣಿಸಿದ್ದಾನೆಂದು ಭ್ರಮಿಸಿದ್ದಾರೆ. ಯೇಸು ಮೊದಲೇ ಮರಣ ವಿಷಯದಲ್ಲಿ ತೋರಿಸಿದ ಸತ್ಯವನ್ನು, ಹೇಳಿದ ಮಾತುಗಳನ್ನು ಮನುಷ್ಯರು ಮರೆತುಹೋಗಿದ್ದಾರೆ.

**ಪ್ರಶ್ನೆ :– ಇಷ್ಟು ಆಳವಾದ ವಿಷಯ ಮುಸ್ಲಿಮ್‌ರಿಗೆ ತಿಳಿದಿಲ್ಲ ಅಲ್ಲವೆ! ಅವರು ಯೇಸು ಮರಣಿಸಲಿಲ್ಲವೆಂದು ಯಾವ ಆಧಾರದಿಂದ ಹೇಳುತ್ತಿದ್ದೀರ. ನೀವು ಹೇಳುವ ವಿಷಯ ಮುಸ್ಲಿಮ್‌ರ ವಾದನೆಗೆ ಬಲ ಕೈಗೂಡಿಸುವಂತಿದೆ. ಇದಕ್ಕೆ ನೀವೇನು ಹೇಳುತ್ತೀರ?**

**ಉತ್ತರ :–** ನಾನು ಹೇಳುವುದು ಜ್ಞಾನ. ನನ್ನ ವಾದನೆ ಸತ್ಯದಕಡೆ ಇರುತ್ತದೇ ಹೊರತು, ಇತರರನ್ನು ಪ್ರೋತ್ಸಹಿಸುವುದಾಗಿ ಇರುವುದಿಲ್ಲ. ಅವರದು ಸತ್ಯವಾದರೆ ನನ್ನ ಮಾತು ಅವರಕಡೆ ಇರುತ್ತದೆ. ಆದರೆ ಅವರು ಸಂಪೂರ್ಣವಾಗಿ ತಿಳಿದು ಸತ್ಯವನ್ನು ಕುರಿತು ವಾದಿಸಲಿಲ್ಲ. ಆದುದರಿಂದ ಅವರ ವಾದನೆಕಡೆ ನನ್ನ ಮಾತುಗಳಿರುವುದಿಲ್ಲ. ಮುಸ್ಲಿಮ್‌ರೆಲ್ಲರೂ ಸ್ಥೂಲ ವಿಷಯಗಳನ್ನೇ ನಂಬುತ್ತಿರುತ್ತಾರೆ. ಸೂಕ್ಷ್ಮವಿಷಯಗಳನ್ನು ಕುರಿತು ಸ್ವಲ್ಪವೂ ಆಲೋಚಿಸುವುದಿಲ್ಲ. ಅವರ ಭಾಷೆಯಲ್ಲಿ ಹೇಳಿಕೊಳ್ಳುವ **"ಮುಹ್ಕಮಾತ್, ಮುತಷಾಭಿಹಾತ್"** ಎಂಬ ವಾಕ್ಯಗಳಲ್ಲಿ ಮುಹ್ಕಮಾತ್ ವಾಕ್ಯಗಳನ್ನು ಹೊರತುಪಡಿಸಿ ಮುತಷಾಭಿಹಾತ್ ವಾಕ್ಯಗಳನ್ನು ನಂಬುವುದಿಲ್ಲ. ಅಂದರೇ ಸ್ಥೂಲವನ್ನು ಹೊರತುಪಡಿಸಿ ಸೂಕ್ಷ್ಮವನ್ನು ನಂಬುವುದಿಲ್ಲ. ದೇವರು ಸೂಕ್ಷ್ಮವಾದವನು, ದೇವರ ಜ್ಞಾನ ಸೂಕ್ಷ್ಮವಾದುದೇ. ಆದರೆ ಅಲ್ಲಾಹ್ ವಿಷಯದಲ್ಲಿ ಸೂಕ್ಷ್ಮ ವಿಷಯಗಳನ್ನು ನಂಬದಿರುವುದರಿಂದ ಕಾಣಿಸದ ಯೇಸು ಮರಣವನ್ನು ಕುರಿತು ಅವರು ಕುರುಡರಂತೆ ಮಾತನಾಡುವುದು ಹೊರತು ಅವರ ವಾದನೆಯಲ್ಲಿ ಸತ್ಯ ಇಲ್ಲವೆಂದು ತಿಳಿಯುತ್ತಿದೆ.

ಬೈಬಲ್‌ನಲ್ಲಿ ಬರೆದ ವಾಕ್ಯಗಳನ್ನು ಆಧಾರ ಮಾಡಿಕೊಂಡು ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಸ್ಥಿತಿಯಲ್ಲಿ ಮುಸ್ಲಿಮ್‌ರು ಮಾತನಾಡುವುದು ನಡೆಯುತ್ತದೆ. ಶರೀರದಲ್ಲಿ ನಿವಾಸಿಸುವ ಜೀವಿಯು ಕಣ್ಣಿಗೆ ಕಾಣಿಸುವವನಲ್ಲ.

ಯೇಸು ಶಿಲುಬೆ ಮೇಲೆ ಮರಣಿಸಿರುವುದು ಎಲ್ಲರೂ ನೋಡಿದ್ದಾರೆ. ನಂತರ ಮರಣಿಸಿದ ದೇಹವನ್ನು ಸಮಾಧಿ ಕೂಡ ಮಾಡಿದ್ದಾರೆ. ಆದರೆ ಅಲ್ಲಿ ಯೇಸು ಹೊಂದಿದ ಮರಣವನ್ನು ಕುರಿತು ಯಾರಿಗೂ ತಿಳಿದಿಲ್ಲ. ಯೇಸು ಮರಣಿಸಿದ್ದಾನೆಂದು ಕೆಲವರು ಅಂದುಕೊಂಡರೆ, ಮರಣಿಸಲಿಲ್ಲವೆಂದು ಕೆಲವರು ಹೇಳುತ್ತಿದ್ದಾರೆ.

**ಪ್ರಶ್ನೆ :– ಯೇಸು ಶಿಲುಬೆ ಮೇಲೆ ಮರಣಿಸಿದ್ದಾನಾ? ಇಲ್ಲವಾ? ನೀವೇ ಹೇಳಿರಿ?**

**ಉತ್ತರ :–** ಮರಣಿಸಲಿಲ್ಲ. ಆತನು ಶಿಲುಬೆ ಮೇಲೆ ಮರಣಿಸಿದಂತೆ ಕಾಣಿಸಿರುವುದು ನಿಜವೇ. ಆದರೂ ಯೇಸು ಅಲ್ಲಿ ಮರಣಿಸಲಿಲ್ಲ.

**ಪ್ರಶ್ನೆ :– ಆದರೆ ಯೇಸು ಯಾವಾಗ ಮರಣಿಸಿದ್ದಾನೆ?**

**ಉತ್ತರ :–** ಯೇಸು 63 ವರ್ಷಗಳ ವಯಸ್ಸು ಇರುವಾಗ ಮರಣಿಸಿದ್ದಾನೆ.

**ಪ್ರಶ್ನೆ :– ಯೇಸು ಶಿಲುಬೆ ಮೇಲೆ 33 ವರ್ಷಗಳಿಗೆ ಮರಣಿಸಿದ್ದಾನೆಂದು ಆಗ ನೋಡಿದ ಪ್ರತ್ಯಕ್ಷ ಸಾಕ್ಷಿಗಳು ಹೇಳುವುದು ಅಸತ್ಯವಾಗುತ್ತದಾ?**

**ಉತ್ತರ :–** ನಿಜ ತಿಳಿಯದೆ ಮಾತನಾಡಿದರೆ ಅವರು ಹೇಳಿರುವುದು ಒಂದು ರೀತಿಯಾಗಿ ಅಸತ್ಯವೇ ಆಗುತ್ತದೆ.

**ಪ್ರಶ್ನೆ :– ಅವರು ಕಣ್ಣಿನಿಂದ ನೋಡಿರುವುದು ಅಸತ್ಯವಾಗುತ್ತದಾ?**

**ಉತ್ತರ :–** ಕಣ್ಣಿನಿಂದ ನೋಡಿರುವುದು ಸತ್ಯವೇ ಆದರೂ, ಕಣ್ಣಿಗೆ ಕಾಣಿಸದ ಸೂಕ್ಷ್ಮಭಾಗಗಳು ಸತ್ಯ ಎನ್ನುವುದಕ್ಕೆ ಸಾಧ್ಯವಿಲ್ಲ. ಶರೀರ ಕಾಣಿಸಿದರೂ, ಶರೀರದಲ್ಲಿನ ಜೀವಿಯು, ಆತ್ಮ ಕಾಣಿಸುವುದಿಲ್ಲ! **"ಜೀವಿಯು ಶರೀರವನ್ನು ಬಿಡುವುದನ್ನನುಸರಿಸಿ ಸಾವು (ಮರಣ)"** ಎನ್ನುತ್ತೇವೆ. ಹಾಗೆಯೇ **"ಶರೀರದಲ್ಲಿ ಸೇರುವುದನ್ನು ಜನನ"** ಎನ್ನುತ್ತೇವೆ. ಯೇಸು ಶಿಲುಬೆ ಮೇಲೆ ಏರಿಸಲ್ಪಟ್ಟ ಆತನ ಶರೀರಕ್ಕೆ ಮೊಳೆಗಳನ್ನು ಹೊಡೆದಿರುವುದು ಸತ್ಯವೇ, ಆದರೆ ಆತನ ಶರೀರದಿಂದ ಜೀವಿಯು ಹೊರಗೆ ಹೋಗಿದ್ದಾನಾ? ಆತ್ಮ ಹೊರಗೆ ಹೋಗಿದೆಯಾ? ಎನ್ನುವ ವಿಷಯ ಕ್ರೈಸ್ತರಿಗಾಗಲಿ, ಮುಸ್ಲಿಮ್‌ರಿಗಾಗಲಿ ತಿಳಿದಿಲ್ಲ. ಅಂತಿಮ ದೈವಗ್ರಂಥದಲ್ಲಿ ಯೇಸುನನ್ನು ಕುರಿತು, ಯೇಸು ಮರಣವನ್ನು

ಕುರಿತು ಬರೆದ ಕೆಲವು ವಾಕ್ಯಗಳನ್ನು ಆಧಾರ ಮಾಡಿಕೊಂಡು, ಅದಕ್ಕೆ ಜೊತೆಯಾಗಿ ಕೆಲವು ಬೈಬಲ್ ವಾಕ್ಯಗಳನ್ನು ಸೇರಿಸಿಕೊಂಡು ಮುಸ್ಲಿಮ್‌ರು ಮಾತನಾಡುತ್ತಿದ್ದಾರೆ ಹೊರತು, ಅವರು ಕಣ್ಣಿಗೆ ಕಾಣಿಸದ ಸೂಕ್ಷ್ಮವಾದ ಜೀವಾತ್ಮ, ಆತ್ಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತನಾಡುತ್ತಿಲ್ಲ. ವಾಸ್ತವಕ್ಕೆ ಆತನಿಗೆ ಎಂದರೇ **ಯೇಸುಗೆ 33 ವರ್ಷಗಳಲ್ಲಿ ಮರಣವೇ ಬರಲಿಲ್ಲ. ಮರಣ ಆತನ ವಯಸ್ಸು 63 ವರ್ಷಗಳು ಕಳೆದಾಗ ಬಂದಿದೆ.** ಆದರೆ ಆ ವಿಷಯ ಇಂದಿಗೂ ಯಾರಿಗೂ ತಿಳಿದಿಲ್ಲ.

**ಪ್ರಶ್ನೆ :– ಮುಸ್ಲಿಮ್‌ರ ಮಾತನ್ನು ಪಕ್ಕಕ್ಕಿಟ್ಟು ಕ್ರೈಸ್ತರು ಪ್ರತ್ಯಕ್ಷ ಸಾಕ್ಷಿಯಾಗಿ ನೋಡಿರುವುದೇ ಹೇಳಿದ್ದಾರೆ! ಅದು ಸಹ ವಾಸ್ತವ ಅಲ್ಲವಾ!**

**ಉತ್ತರ :–** ಕ್ರೈಸ್ತರು ನೋಡಿರುವುದು ಯೇಸುವೊಂದರ ತಾತ್ಕಾಲಿಕ ಮರಣವನ್ನು ನೋಡಿದ್ದಾರೆ ಹೊರತು ಮರಣವನ್ನು ಕುರಿತು ನೋಡಲಿಲ್ಲ. **ಯೇಸು ಮರಣ ಶಿಲುಬೆ ಮೇಲೆ ನಡೆಯಲಿಲ್ಲ. ಗುಜರಾತ್, ರಾಜಸ್ಥಾನ್ ರಾಷ್ಟ್ರಗಳಿಗೆ ಮಧ್ಯದಲ್ಲಿರುವ ಅರಣ್ಯದಲ್ಲಿ ಯೇಸು ಮರಣಿಸಿದ್ದಾನೆಂಬ ವಿಷಯ ಯಾವತ್ ಪ್ರಪಂಚಕ್ಕೇ ತಿಳಿದಿಲ್ಲ. ಅಷ್ಟೇ ಅಲ್ಲ ಆತನು 63 ವರ್ಷಗಳಲ್ಲಿ ಮರಣಿಸಿದ್ದಾನೆಂಬ ವಿಷಯವೂ ಸಹ ತಿಳಿದಿಲ್ಲ.**

**ಪ್ರಶ್ನೆ :– "ಊರೆಲ್ಲವೂ ಉತ್ತರವೆಂದರೇ ನನ್ನೊಬ್ಬನದು ದಕ್ಷಿಣವೆನ್ನುವಂತೆ" ಯೇಸು ಶಿಲುಬೆ ಮೇಲೆ ಮರಣಿಸಲಿಲ್ಲ. ಆಗ ಆತನು ಹೊಂದಿರುವುದು ತಾತ್ಕಾಲಿಕ ಮರಣ ಮಾತ್ರವೇಯೆಂದು, ಯೇಸು 63 ವರ್ಷಗಳಲ್ಲಿ ಮರಣಿಸಿದ್ದಾನೆಂದು ಹೇಗೆ ಹೇಳುತ್ತಿದ್ದೀರ? ನೀವು ಹೇಳುವ ಮಾತಿಗೆ ಆಧಾರವನ್ನು ತೋರಿಸುತ್ತೀರಾ.**

**ಉತ್ತರ :–** ಮೊದಲ ಮಾತಿಗೆ ಆಧಾರ ಇರುವುದಿಲ್ಲ, ಎರಡನೆ ಮಾತಿಗೆ ಮೊದಲನೆಯದು ಆಧಾರವಾಗುತ್ತದೆ. ಇದು ಹೊಚ್ಚಹೊಸ ವಿಷಯ. ಆದುದರಿಂದ ಕೇಳುವವನು ಕೇಳಬಹುದು, ಕೇಳದವರು ಬಿಟ್ಟುಬಿಡಬಹುದು. ನಾನು ಹೇಳುವುದು ಸತ್ಯವೆಂದು ಯಾರನ್ನು ಬಲವಂತ ಮಾಡುವುದಿಲ್ಲ. ನನ್ನ

ಮಾತು ಸರಿಯಾದುದೆಂದು ಅಂದುಕೊಳ್ಳುವುದಕ್ಕೆ ಅದು ನಿಮ್ಮ ಇಷ್ಟಾಯಿಷ್ಟಗಳ ಮೇಲೆ ಆಧಾರಪಟ್ಟಿರುತ್ತದೆ. ಮರಣ ವಿಷಯದಲ್ಲಿ ಇಲ್ಲಿಯವರೆಗೂ ತಿಳಿಯದ ರಹಸ್ಯಗಳು ಬಹಳ ಇವೆ. ಆದುದರಿಂದ ಮೊದಲು 'ಮರಣ' ಎಂದರೆ ಏನೋ ತಿಳಿಯಬೇಕಾಗಿರುತ್ತದೆ. ಮರಣ ವಿಷಯವೇ ಅಲ್ಲ ಹುಟ್ಟುವ ಸಮಯದಲ್ಲಿ, ಜನನ ಹೇಗೆ ನಡೆಯುತ್ತಿದೆಯೋ ಸಹ ತಿಳಿಯದ ಸ್ಥಿತಿಯಲ್ಲಿ ನಾವು ಇದ್ದೇವೆ. ಆದ್ದರಿಂದ ಪ್ರಸವಿಸಲ್ಪಟ್ಟ ಮಗುವಿನಲ್ಲಿ ಅರ್ಧಗಂಟೆ ಸಮಯ ಚಲನೆಗಳು ಬಾರದಿದ್ದರೆ ಆ ಮಗು (ಆ ಶಿಶು) ಹೊಟ್ಟೆಯಲ್ಲಿಯೇ ಮರಣಿಸಿದೆಯೆಂಬ ನಿರ್ಣಯಕ್ಕೆ ಬಂದು ಶಿಶುವನ್ನು  ಭೂಮಿಯಲ್ಲಿ ಹೂತಿಡುತ್ತಿದ್ದೇವೆ. ಜನನ ವಿಷಯ ತಿಳಿಯದ ನಾವು ತಾಯಿಗರ್ಭದಿಂದ ಹೊರಗೆ ಬರುವುದೇ ಹುಟ್ಟುವಿಕೆ ಎಂದು ಅಂದುಕೊಳ್ಳುತ್ತೇವೆ. ಅದು ಕೇವಲ ಶರೀರಕ್ಕೆ ಮಾತ್ರವೇ ಹುಟ್ಟುವಿಕೆ ಯೆಂದು, ಜೀವಾತ್ಮದ ಹುಟ್ಟುವಿಕೆ ಬೇರೆಯೆಂದು ತಿಳಿಯದ ಮನುಷ್ಯರು ಎಷ್ಟೋ ಜನ ಶಿಶುಗಳನ್ನು ಕೈಯ್ಯಾರೆ ಸಾಯಿಸಿಕೊಳ್ಳುತ್ತಿದ್ದೇವೆ. ಹಾಗೆ ಸಾವಿನ ವಿಷಯ ಸಹ ತಿಳಿಯದ ನಾವು ಮನುಷ್ಯನಲ್ಲಿ ಚೈತನ್ಯ ಇಲ್ಲದಂತೆ ಹೋಗುತ್ತಲೇ ಅದನ್ನೇ ಸಾವೆಂದುಕೊಂಡು ತಪ್ಪಾಗಿ ತಿಳಿಯುತ್ತಿದ್ದೇವೆ. ಯೇಸುಪ್ರಭುವಿನ ವಿಷಯದಲ್ಲಿ ಅಂತಹ ತಪ್ಪನ್ನೇ ಮಾಡಿದಂತೆ ತಿಳಿಯುತ್ತಿದೆ.

ಮರಣಗಳು ಒಟ್ಟು ನಾಲ್ಕು ವಿಧಗಳಿವೆಯೆಂದೂ, ಅದರಲ್ಲಿ ಕೊನೆಯದು ಅಪರೂಪವಾಗಿ ಬರುವುದೆಂದು, ಮುಖ್ಯವಾಗಿ ಮೂರು ಮರಣಗಳನ್ನು ಮನುಷ್ಯ ಕರ್ಮ ಪ್ರಕಾರ ಹೊಂದುತ್ತಿದ್ದಾನೆಂದು ಬಹಳ ಜನರಿಗೆ ತಿಳಿದಿಲ್ಲ. ಬಹಳ ಜನರಿಗೆ ಅನ್ನುವುದಕ್ಕಿಂತ ಎಲ್ಲರಿಗೂ ತಿಳಿದಿಲ್ಲವೆಂದು ಹೇಳಬಹುದು. ಮರಣಗಳಲ್ಲಿ 1) ಅಕಾಲ ಮರಣ 2) ತಾತ್ಕಾಲಿಕ ಮರಣ 3) ಕಾಲ ಮರಣ ಎಂದು ಮುಖ್ಯವಾಗಿ ಮೂರು ಮರಣಗಳು ಇವೆ.  ನಾಲ್ಕನೆಯದಾದ 'ಕೊನೆಯ ಮರಣ' ಅಥವಾ 'ಮೋಕ್ಷ ಮರಣ' ಮನುಷ್ಯರಿಗೆ ಅಪರೂಪವಾಗಿ ಸಂಭವಿಸುತ್ತಿರುತ್ತದೆ. ಮನುಷ್ಯನ ಜೀವನದಲ್ಲಿ ಮನುಷ್ಯನ ಕರ್ಮವನ್ನನುಸರಿಸಿ ತಾತ್ಕಾಲಿಕ ಮರಣ, ಆಕಾಲ ಮರಣ ಸಂಭವಿಸಬಹುದು ಅಥವಾ

ಸಂಭವಿಸದಿರಬಹುದು. ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗು ಕಾಲಮರಣ ತಪ್ಪದೆ ಇರುತ್ತದೆ. ಸಾವು ಹುಟ್ಟುಗಳು ತಪ್ಪದೆ ಇರುತ್ತಿರುವುದರಿಂದ, ಅಕಾಲ ಮರಣವಾಗಲಿ, ತಾತ್ಕಾಲಿಕ ಮರಣವಾಗಲಿ ಮನುಷ್ಯರ ಕರ್ಮದಲ್ಲಿದ್ದರೆ ತಪ್ಪದೆ ಬರುತ್ತದೆ. ಕರ್ಮ ಇಲ್ಲದಿದ್ದರೆ ಬಾರದಂತಿರಬಹುದು. ಆದರೆ ಸಾವುಹುಟ್ಟುಗಳು ಎರಡು ಕರ್ಮ ಅನುಭವದಲ್ಲಿ ಇಲ್ಲದಂತೆ ಇವೆ. ಸಾವು ಹುಟ್ಟುಗಳನ್ನು ಜೀವಿಯು ಅನುಭವಿಸುವುದಿಲ್ಲ ಆದರೆ ಅವು ಎರಡು ಜೀವನಕ್ಕೆ ಮೊದಲು, ಕೊನೆಯ ದಂತವುಗಳು.

ಯೇಸು ಜೀವನದಲ್ಲಿ 33ನೇ ವರ್ಷದಲ್ಲಿ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಪುನಃ ಮೂರು ದಿನಗಳಿಗೆ ಸಜೀವವಾಗಿ ಎದ್ದಿರುವ ಮಾತು ಅಕ್ಷರಸಃ ಸತ್ಯವಾಗಿದೆ. ಯೇಸು ಬದುಕಿರುವಾಗಲೇ ತನ್ನ ಶಿಷ್ಯರೊಂದಿಗೆ ತಿರುಗುತ್ತಿರುವಾಗಲೇ ತನ್ನ ತಾತ್ಕಾಲಿಕ ಮರಣವನ್ನು ಕುರಿತು ತನ್ನ ಶಿಷ್ಯರಿಗೆ ಮೂರು ಸಲ ಹೇಳಿದ್ದಾನೆ. ಯೇಸು ಜೀವನ ವಿಶೇಷವಿರುವ ನಾಲ್ಕು ಸುವಾರ್ತೆಗಳಲ್ಲಿ ಒಂದು ಯೋಹಾನ್ ಸುವಾರ್ತೆಯಲ್ಲಿ ಹೊರತು ಉಳಿದ ಮೂರು ಸುವಾರ್ತೆಗಳಾದ ಮತ್ತಾಯ, ಮಾರ್ಕ, ಲೂಕಾ ಸುವಾರ್ತೆಗಳಲ್ಲಿ ಪ್ರತಿಯೊಂದರಲ್ಲಿ ಯೇಸು ಮೂರು ಸಲ ತನ್ನ ಮರಣವನ್ನು ಕುರಿತು ಹೇಳಿದಂತೆ ಇದೆ. ಅದರಲ್ಲಿ ಮೂರು ದಿನಗಳು ಮರಣಿಸಿ ಪುನಃ ಏಳುತ್ತೇನೆಂದು ಮುಖ್ಯವಾಗಿ ಹೇಳಲ್ಪಟ್ಟಿದೆ. ಹಾಗೆ ಪುನಃ ಏಳುತ್ತೇನೆಂದು ಹೇಳಿದಾಗ ಅದು ತಾತ್ಕಾಲಿಕವಾಗಿ ಮರಣಿಸುವುದೇ ಹೊರತು ಪೂರ್ತಿಯಾಗಿ ಮರಣಿಸುವುದು ಅಲ್ಲವೆಂದು ಬೈಬಲ್ ಓದಿದವರು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಆ ದಿನ ಆತನ (ಯೇಸು) ಮಾತುಗಳನ್ನು ಕೇಳಿದ 12 ಜನ ಶಿಷ್ಯರು ಸಹ ಆತನ ಮಾತುಗಳಲ್ಲಿನ ಆಂತರ್ಯವನ್ನು ಗ್ರಹಿಸದೇ ಹೋಗಿದ್ದಾರೆ. ಬೈಬಲ್ ಗ್ರಂಥದಲ್ಲಿ ಯೇಸು ತನ್ನ ಶಿಷ್ಯರಿಗೆ ತನ್ನ ಮರಣವನ್ನು ಕುರಿತು ಏನು ಹೇಳಿದ್ದಾನೋ ಮತ್ತಾಯ ಸುವಾರ್ತೆಯಲ್ಲಿ ಬರೆಯಲ್ಪಟ್ಟಿರುವುದನ್ನು ಒಂದು ಸಲ ನೋಡೋಣ. **(ಮತ್ತಾಯ 16-21) "ತಾನು ಯೊರೂಸಲೇಮಿಗೆ ಹೋಗಿ ಅಲ್ಲಿ ಹಿರಿಯರಿಂದಲೂ, ಪ್ರಧಾನ**

**ಯಾಜಕರಿಂದಲೂ, ಶಾಸ್ತ್ರಿಗಳಿಂದಲೂ ಬಹಳ ಹಿಂಸೆಗಳನ್ನನುಭವಿಸಿ, ಕೊಲ್ಲಲ್ಪಟ್ಟು, ಮೂರನೆ ದಿನ ಏಳುವುದು ಅಗತ್ಯವೆಂದು ಯೇಸು ತನ್ನ ಶಿಷ್ಯರಿಗೆ ತಿಳಿಸಿದ್ದಾನೆ.** ಮತ್ತಾಯ ಸುವಾರ್ತೆ 16ನೇ ಅಧ್ಯಾಯದಲ್ಲಿ ತನ್ನ ಮರಣವನ್ನು ಕುರಿತು ಮೊದಲು ತಿಳಿಸಿದ ಯೇಸು 17ನೇ ಅಧ್ಯಾಯದಲ್ಲಿ 22ನೇ ವಾಕ್ಯದಲ್ಲಿ ಎರಡನೆ ಸಲ ತನ್ನ ಮರಣವನ್ನು ಕುರಿತು ಹೇಳಿದ್ದಾನೆ. **(17–22) "ಅವರು ಗಲಿಲಾಯ ದಲ್ಲಿ ತಿರುಗುತ್ತಿರುವಾಗ ಯೇಸು ಮನುಷ್ಯ ಕುಮಾರನು ಮನುಷ್ಯರ ಕೈಗೆ ಒಪ್ಪಿಸಿಕೊಡಲ್ಪಡುತ್ತಿದ್ದಾನೆ. ಅವರು ಆತನನ್ನು ಸಾಯಿಸುತ್ತಾರೆ. ಮೂರನೆ ದಿನದಂದು ಆತನು ಏಳುತ್ತಾನೆಂದು ಅವರೊಂದಿಗ ಹೇಳಿದಾಗ ಅವರು ಬಹಳ ದುಃಖ ಪಟ್ಟಿದ್ದಾರೆ."**

ಯೇಸು ತನ್ನ ಮರಣವನ್ನು ಕುರಿತು ಮೂರನೆ ಸಲ ಮತ್ತಾಯ 20–17ನೇ ವಚನದಲ್ಲಿ ಹೇಳಲಾಗಿದೆ. **(20–17) "ಯೇಸು ಯೆರೂಸಲೇಮಿಗೆ ಹೋರಡಬೇಕಾದಾಗ ಆತನ ಹನ್ನೆರಡು ಜನ ಶಿಷ್ಯರನ್ನು ಏಕಾಂತವಾಗಿ ಕರೆದುಕೊಂಡುಹೋಗಿ, ಮಾರ್ಗದಲ್ಲಿ ಅವರೊಂದಿಗೆ ಹೀಗೆ ಹೇಳಿದನು. "ಇಗೋ ನಾವು ಯೆರೂಸಲೇಮಿಗೆ ಹೋಗುತ್ತಿದ್ದೇವೆ. ಅಲ್ಲಿ ಮನುಷ್ಯ ಕುಮಾರನು ಪ್ರಧಾನ ಯಾಜಕರಿಗು, ಶಾಸ್ತ್ರಿಗಳಿಗು ಒಪ್ಪಿಸಲ್ಪಡುತ್ತಾನೆ. ಅವರು ಆತನಿಗೆ ಮರಣ ಶಿಕ್ಷೆ ವಿಧಿಸಿ, ಆತನನ್ನು ಅಪಹಾಸ್ಯ ಮಾಡುವುದಕ್ಕೂ, ಕೊರಡೆಗಳಿಂದ ಹೊಡೆಯುವು ದಕ್ಕೂ, ಶಿಲುಬೆಗೆ ಹಾಕುವುದಕ್ಕೂ ಅನ್ಯ ಜನರಿಗೆ ಆತನನ್ನು ಒಪ್ಪಿಸುತ್ತಾರೆ. ಮೂರನೆ ದಿನ ಆತನು ಪುನಃ ಏಳುತ್ತಾನೆ."** ಈ ವಿಧವಾಗಿ ಉಳಿದ ಮೂರು ಸುವಾರ್ತೆ ಗಳಲ್ಲಿಯೂ ಮೂರುಸಲ ತನ್ನ ಮರಣವನ್ನು ಕುರಿತು ಯೇಸು ತನ್ನ ಶಿಷ್ಯರಿಗೆ ಮೊದಲೇ ತಿಳಿಸಿದ್ದಾನೆ. ಮೂರು ಸುವಾರ್ತೆಗಳಲ್ಲಿಯೂ ತನ್ನ ಮರಣವನ್ನು ಕುರಿತು ಹೇಳುವುದಲ್ಲದೆ ತಾನು ಮೂರನೆದಿನ ಪುನಃ ಸಜೀವವಾಗಿ ಏಳುತ್ತಾನೆಂದು ಹೇಳಿದ್ದಾನೆ. ಆ ಮಾತುಗಳಿಂದ ಆತನ ಮರಣ ತಾತ್ಕಾಲಿಕವೇ ಯೆಂದು ತಿಳಿಯುತ್ತಿದೆ. ಮೂರು ದಿನಗಳು ಮರಣದಲ್ಲಿದ್ದು ಪುನಃ ಏಳುತ್ತಾನೆಂದು ಶಿಷ್ಯರಿಗೆ ಎಲ್ಲರಿಗೂ ತಿಳಿದುಹೋಗಿದೆ. ಆದರೆ ಶಿಷ್ಯರು ಆತನು ಹೇಳಿದ

ಮಾತನ್ನು ಮರೆತುಹೋಗಿ ಯೇಸು ನಿಜವಾಗಲು ಮರಣಿಸಿದ್ದಾನೆಂದು ಭ್ರಮಿಸಿ ಅಳುವುದು ನಡೆದಿದೆ. ಅಷ್ಟೇ ಅಲ್ಲ ಆತನು (ಯೇಸು) ಪುನಃ ಎದ್ದು ಬಂದನಂತರ ಸಹ ಆತನನ್ನು ಸಜೀವವಾಗಿ ನಂಬಲಾರದೆಹೋಗಿದ್ದಾರೆ. ದೆವ್ವವಾಗಿ ಬದಲಾಗಿ ಬಂದಿದ್ದಾನೆಂದು ಸಹ ಅಂದುಕೊಳ್ಳುವುದು ನಡೆದಿದೆ.

ಯೇಸು ಮೊದಲೇ ತನ್ನ ಮರಣವನ್ನು ಕುರಿತು ಹೇಳಲಾರದೆ ಹೋಗಿದ್ದಾರೆ ಆತನು ಪುನಃ ಬದುಕಿ ಬಂದಿದ್ದಾನೆಂದು ಇಂದಿಗೂ ಯಾರು ನಂಬುವವರು ಅಲ್ಲವೇನೋ! ಯೇಸು ಮೂರು ದಿನಗಳಿಗೆ ಬದುಕಿ ಬರುತ್ತೇನೆಂದು ಮೂರು ಸುವಾರ್ತೆಗಳಲ್ಲಿ ಹೇಳಿದಂತೆ ಮತ್ತಾಯ, ಮಾರ್ಕ, ಲೂಕಾ, ಬರೆದಿಟ್ಟಿದ್ದಾರೆ. ಆದರೆ ಆತನು ಹೇಳಿದ ಮಾತುಗಳಲ್ಲಿ ಶಾಸ್ತ್ರಿಗಳಿಗು, ಪ್ರಧಾನ ಯಾಜಕರಿಗು ಒಪ್ಪಿಸಲ್ಪಟ್ಟಾಗಿನಿಂದ ಮೂರು ದಿನಗಳೆಂದು ಯಾರು ಗುರುತಿಸಲಿಲ್ಲ. ತಾನು 'ಒಪ್ಪಿಸಲ್ಪಟ್ಟ ಸಮಯದಿಂದ' ಮೂರು ದಿನಗಳಿಗೆ ಪುನಃ ತಮ್ಮ ಮುಂದಕ್ಕೆ ಬರುತ್ತೇನೆಂದು ಶಿಷ್ಯರಿಗೆ ಹೇಳಿರುವಾಗ 'ಆತನು ಮರಣಿಸಿದ ನಂತರ ಮೂರು ದಿನಗಳಿಗೆ' ಎಂದು ಅಲ್ಲಿನವರು ಅರ್ಥಮಾಡಿಕೊಂಡಿದ್ದಾರೆ. ಅವರಂತೆಯೇ ಈ ದಿನ ಕ್ರೈಸ್ತವ ಲೋಕವೆಲ್ಲವೂ ಅರ್ಥಮಾಡಿಕೊಂಡಿದೆ. ಆದರೆ ಈದಿನ ಮನುಷ್ಯರಿಗೆ ಅರ್ಥವಾದಂತೆ ಯೇಸು ಮರಣಿಸಲಿಲ್ಲ. ಯೇಸು ಮರಣಿಸಿ ಪುನಃ ಬದುಕಿದರೂ ಮೂರು ದಿನಗಳು ಆತನು ಮರಣದಲ್ಲಿ ಇಲ್ಲ. ಆತನು ಮರಣದಲ್ಲಿ ಇದ್ದಿದ್ದು ಕೇವಲ 33 ಗಂಟೆಗಳು ಮಾತ್ರ.

ಮೂರು ದಿನಗಳಿಗೆ 72 ಗಂಟೆಗಳ ಕಾಲ ಬೇಕಾಗುತ್ತದೆ. ಆದರೆ ಯೇಸು ಶುಕ್ರವಾರ ಶಿಲುಬೆಗೆ ಹಾಕಲ್ಪಟ್ಟು ಸಾಯಂಕಾಲ ಮರಣಿಸಿದಾಗ ಆತನು ಒಂದು ಶನಿವಾರ 24 ಗಂಟೆಗಳು ಸಮಾಧಿಯಲ್ಲಿ ಇರುವುದು ನಡೆದಿದೆ. ನಂತರ ಬೆಳಗಿನಜಾವ ಎರಡು ಗಂಟೆಗಳಿಗೆ ಸಜೀವವಾದ ಯೇಸು ಮೂರು ಗಂಟೆಗಳ ಸಮಯದಲ್ಲಿ ಸಮಾಧಿ ಹೊರಗೆ ಬರುವುದು ನಡೆದಿದೆ. ಇದರ ಪ್ರಕಾರ ಶುಕ್ರವಾರ ಸುಮಾರು ಸಾಯಂಕಾಲ ನಾಲ್ಕು ಗಂಟೆಗಳಿಗೆ ತಾತ್ಕಾಲಿಕ ಮರಣವನ್ನು ಹೊಂದಿದ ಯೇಸು ಭಾನುವಾರ ಬೆಳಗಿನಜಾವ ಎರಡು ಗಂಟೆಗಳಿಗೆ

ಸಜೀವವಾಗಿ ಬಂದಿದ್ದಾನೆ. ಇದನ್ನೆಲ್ಲ ಗಮನಿಸಿದರೆ ಯೇಸು ಸಮಾಧಿಯಲ್ಲಿ ಕೇವಲ 33 ಗಂಟೆಗಳ ಸಮಯ ಮಾತ್ರ ಇರುವಂತೆ ತಿಳಿಯುತ್ತಿದೆ. 33 ಗಂಟೆಗಳು ಪ್ರತ್ಯಕ್ಷವಾಗಿ ಸಮಾಧಿಯಲ್ಲಿರುವಂತೆ ತಿಳಿದಾಗ ಆತನು ಮೊದಲು ಹೇಳಿದ ಮಾತುಗಳಲ್ಲಿ ಮೂರು ದಿನಗಳೆಂದು ಇದೆ ಅಲ್ಲವೇ! ಎಂದು ಯಾರಾದರೂ ಪ್ರಶ್ನಿಸಬಹುದು. ಆ ಪ್ರಶ್ನೆಗೆ ಈದಿನ ಯಾರ ಹತ್ತಿರವು ಸಮಾಧಾನ ಇಲ್ಲವೆಂದೇ ಹೇಳಬಹುದು. ಆದರೆ ಯೇಸು ತನ್ನ ಭಕ್ತರೊಂದಿಗೆ **"ನಾನು ನಿಮಗೆ ಯಾರೂ ಎದುರಾಡದ ಜ್ಞಾನವನ್ನು ಬೋಧಿಸುತ್ತೇನೆಂದು"** ಹೇಳಿದ್ದಾನೆ.

**ಯೇಸು ಹೇಳಿದ ಎಲ್ಲಾ ಮಾತು ತಪ್ಪದೇ ನಡೆದೇ ತೀರುತ್ತದೆ.** ಹಾಗಿರುವಾಗ ಆತನು ಎದುರಾಡದ ಜ್ಞಾನವನ್ನು ತಿಳಿಸುತ್ತೇನೆಂದು ಹೇಳಿದ್ದಾನಾದ್ದರಿಂದ ಆತನ ಜ್ಞಾನದಿಂದ ಪ್ರತಿ ಪ್ರಶ್ನೆಗು ಉತ್ತರ ಹೇಳುವ ಸಾಮರ್ಥ್ಯ ಆತನ ಜ್ಞಾನವನ್ನು ಅನುಸರಿಸಿದವರಿಗಿರುತ್ತದೆ. ಈಗ ಆತನು ಹೇಳಿದ ಮೂರು ದಿನಗಳ ಕುರಿತಾದ ಪ್ರಶ್ನೆಗೆ ಈ ವಿಧವಾಗಿ ಉತ್ತರ ತಿಳಿಯುತ್ತಿದೆ. ಯೇಸು ತನ್ನ ಮರಣವನ್ನು ಕುರಿತು ಮೂರುಸಲ ತಿಳಿಸಿದಾಗ **"ಯೆರೂಸಲೇಮಿಗೆ ಹೋಗುತ್ತಿದ್ದೇವೆ ಅಲ್ಲಿ ನಾನು ಒಪ್ಪಿಸಲ್ಪಡುತ್ತೇನೆ" ಎಂದು ಹೇಳಿದ್ದಾನೆ.** ಒಪ್ಪಿಸಲ್ಪಟ್ಟಾಗಿನಿಂದ ತನ್ನ ಶಿಷ್ಯರೊಂದಿಗೆ ಸಂಬಂಧ ಇಲ್ಲದಂತಾಗುತ್ತದೆ. ಪುನಃ ಮೂರು ದಿನಗಳಿಗೆ ಸಂಬಂಧ ಏರ್ಪಡುತ್ತಿದೆ. ಆದುದರಿಂದ "ಮೂರನೆದಿನ" ಎಂಬ ಮಾತನ್ನು ಶಿಷ್ಯರಿಂದ ದೂರವಾದಾಗಿನಿಂದ ಲೆಕ್ಕಿಸಬೇಕಾಗಿದೆ. ಹಾಗೆ ಲೆಕ್ಕಿಸಿದರೆ ಗುರುವಾರ ರಾತ್ರಿ ಯೇಸುನನ್ನು ಬಂಧಿಸಿ ಶಿಷ್ಯರಿಂದ ದೂರವಾಗಿ ತೆಗೆದುಕೊಂಡುಹೋದರೆ ಶುಕ್ರವಾರ, ಶನಿವಾರ ಪೂರ್ತಿ ಕಳೆದಾಗ ಬೆಳ್ಳಗಾದರೆ ಭಾನುವಾರ ಎಂದಾಗ! ಆ ಬೆಳಗಿನಜಾವ ಸುಮಾರು ಮೂರು ಗಂಟೆಗಳ ಪ್ರಾಂತದಲ್ಲಿ ಯೇಸು ಪುನಃ ಸಜೀವವಾಗಿ ಬಂದಿದ್ದಾನೆ. ಇದರ ಪ್ರಕಾರ ಯೇಸು ಬಂಧಿಸಲ್ಪಟ್ಟಾಗಿನಿಂದ ಪುನಃ ಬರುವವರೆಗು ಮೂರನೆದಿನ ಆಗುತ್ತದೆ. ಎರಡು ದಿನಗಳು ಪೂರ್ತಿ ಕಳೆದಾಗ ಮೂರನೆ ದಿನ ಯೇಸು ಏಳುವುದು ನಡೆದಿದೆ, ನಡೆದಿರುವುದನ್ನು ಅನುಸರಿಸಿ ಯೇಸು ಮಾತು ತಪ್ಪದೆ ನೆರವೇರಿದೆ ಯೆಂದು ಹೇಳಬಹುದು.

**ಪ್ರಶ್ನೆ :– ಯೇಸು ತನ್ನ ಶಿಷ್ಯರಿಗೆ ಪುನಃ ಮೂರನೆ ದಿನ ಕಾಣಿಸಿದ್ದಾನೆಂದರೇ ಅದರಲ್ಲಿ ತಪ್ಪು ಹಿಡಿಯುವುದಕ್ಕೆ ಏನುಯಿಲ್ಲ. ಇದರಲ್ಲಿ ನಮಗೊಂದು ಸಂಶಯ ಉಂಟಾಗುತ್ತಿದೆ. ಇಷ್ಟು ಜನ ಕ್ರೈಸ್ತರಾಗಲಿ, ಇತರ ಮತಸ್ಥರಾಗಲಿ ಗುರುತಿಸಲಾರದ ವಿಷಯವನ್ನು ನೀವು ಹೇಗೆ ಗುರುತಿಸಿದ್ದೀರ? ನಮಗೆ ಅರ್ಥವಾಗುವಂತೆ ಸತ್ಯವನ್ನೇ ಹೇಳಬೇಕೆಂದು ಕೋರುತ್ತಿದ್ದೇವೆ?**

**ಉತ್ತರ :–** ನಿನಗೆ ಅರ್ಥವಾದರೂ, ಅರ್ಥವಾಗದಿದ್ದರೂ ನಾನು ಇರುವ ಸತ್ಯವನ್ನೇ ಹೇಳುತ್ತೇನೆ. ಯೇಸು ತನ್ನ ಜೀವನದಲ್ಲಿ ಅನೇಕ ಸಂದರ್ಭಗಳಲ್ಲಿ **"ನಾನು ನನ್ನ ತಂದೆ ಏಕವಾಗಿದ್ದೇವೆ"** ಎಂದು ಹೇಳುವುದು ನಡೆದಿದೆ. ಅಷ್ಟೇ ಅಲ್ಲ **"ನಾನು ಹೇಳುವ ಪ್ರತಿಯೊಂದು ಮಾತು ನನ್ನ ತಂದೆಯದೇ ಹೊರತು ನನ್ನದಲ್ಲ"** ಎಂದೂ ಸಹ ಹೇಳಿದ್ದಾನೆ. ಹಾಗೆಯೇ ಯೇಸು ತನ್ನ ತಂದೆಯೊಂದಿಗೆ ಹೇಗೆ ಏಕವಾಗಿದ್ದಾನೋ ಹಾಗೆಯೇ ನಾನು ನನ್ನ ಆತ್ಮದೊಂದಿಗೆ ಏಕವಾಗಿದ್ದೇನೆ. ಆದುದರಿಂದ ಆತ್ಮ ಹೇಳುವ ಪ್ರತಿಯೊಂದು ಮಾತನ್ನು ನೀವು ಕೇಳಿಸಿ ಕೊಳ್ಳುತ್ತಿದ್ದೀರ. ಯಾವುದೂ ನಾನು ಸ್ವತಃವಾಗಿ ಮಾತನಾಡಲಿಲ್ಲ. ಆತ್ಮ ನನ್ನೊಂದಿಗೆ ಏನು ಹೇಳಿದೆಯೋ, ಅದನ್ನೇ ನಾನು ನಿಮ್ಮೊಂದಿಗೆ ಹೇಳುವುದು ನಡೆಯುತ್ತಿದೆ. ಯೇಸು ಇರುವ ದಿನ, ಆತನು ತಾತ್ಕಾಲಿಕ ಮರಣವನ್ನು ಹೊಂದಿದ ಸಮಯದಲ್ಲಿ ಅವರಲ್ಲಿಯೇ ನನ್ನಲ್ಲಿನ ಆತ್ಮ ಇರುವುದರಿಂದ ಅಲ್ಲಿ ಏನು ನಡೆದಿರುವುದು ಆತ್ಮವೇ ತಿಳಿಸುತ್ತಿದೆ. ಅಷ್ಟೇ ಹೊರತು ನಾನು ಸ್ವತಃವಾಗಿ ಹೇಳಿರುವುದು ಏನು ಇಲ್ಲ.

**ಪ್ರಶ್ನೆ :– ಯಾರಿಗೂ ಹೇಳದ ಆತ್ಮ, ಯಾರೊಂದಿಗೂ ಮಾತನಾಡದ ಆತ್ಮ, ನಿಮ್ಮೊಂದಿಗೆ ಏಕೆ ಮಾತನಾಡುತ್ತಿದೆ? ನಿಮಗೆ ನಿಮ್ಮ ಆತ್ಮದೊಂದಿಗೆ ಪ್ರತ್ಯೇಕವಾದ ದೋಸ್ತಿ ಇದೆಯಾ?**

**ಉತ್ತರ :–** ಪ್ರತಿ ಮನುಷ್ಯನ ಶರೀರದಲ್ಲಿ ಆತ್ಮಯೆನ್ನುವುದು ಒಂದಿದೆ. ಅದನ್ನೇ ನಿನ್ನ ಪಕ್ಕದವನೆಂದು ಬೈಬಲ್ ಗ್ರಂಥದಲ್ಲಿ ಹೇಳಿದ್ದಾರೆ. ಹುಟ್ಟಿದ ಪ್ರತಿ ಮನುಷ್ಯನಿಗು ಆತನು ಯಾವ ಮತಸ್ಥನಾದರೂ ಸಹ ಅವನಿಗೆ **ಸ್ನೇಹಿತನು ಎನ್ನಲ್ಪಡುವ**

**ಆತ್ಮ, ಪಕ್ಕದವನೆಂಬ ಆತ್ಮ, ತಂದೆಯೆಂಬ ಆತ್ಮ** ಜೀವಾತ್ಮದೊಂದಿಗೆ ಜೊತೆಯಾಗಿ ಶರೀರದಲ್ಲಿ ಇದೆ. ಈ ವಿಷಯವನ್ನು ಭಗವದ್ಗೀತೆಯಿಂದ ಮೊದಲುಗೊಂಡು ಖುರಾನ್‌ವರೆಗು ಮೂರು ದೈವಗ್ರಂಥಗಳಲ್ಲಿಯೂ ಆ ವಿಷಯ ಹೇಳಲ್ಪಟ್ಟಿದೆ. ಪ್ರತಿ ಶರೀರದಲ್ಲಿಯೂ ಯಾರಿಗೂ ತಿಳಿಯದಂತೆ ಪ್ರತಿ ಮಾತನ್ನು ಆತ್ಮವೇ ಮಾತನಾಡುತ್ತಿದೆ. ಆದರೆ ಮನುಷ್ಯನಲ್ಲಿ ಅಜ್ಞಾನದಿಂದ ಮನುಷ್ಯ ತನ್ನಲ್ಲಿನ ಆತ್ಮವನ್ನು ಗುರುತಿಸಲಾರದೆಹೋಗಿ ಎಲ್ಲಾ ತಾನೇ ಮಾತನಾಡಿದಂತೆ ಭ್ರಮಿಸುತ್ತಿದ್ದಾನೆ. ತನ್ನ ಭಾವವನ್ನನುಸರಿಸಿ ನಾನೇ ಮಾತನಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಸ್ವಲ್ಪ ತನ್ನಲ್ಲಿನ ಆತ್ಮಜ್ಞಾನವನ್ನು ಗುರುತಿಸಲ್ಪಟ್ಟರೆ ಇರುವ ಸತ್ಯ ತಿಳಿಯುತ್ತದೆ. ಯೇಸು ತನ್ನ ಜೀವನದಲ್ಲಿ ತಂದೆಯಾದ ಆತ್ಮವನ್ನು ಕುರಿತು ಎಷ್ಟೋಬಾರಿ, ಎಷ್ಟೋ ಸಂದರ್ಭಗಳಲ್ಲಿ ಹೇಳಿದ್ದಾನೆ. ಯೇಸುನನ್ನು ಅನುಸರಿಸುತ್ತಿದ್ದೇವೆಂಬ ಕ್ರೈಸ್ತರು ಯೇಸು ಹೇಳಿದ ಜ್ಞಾನವನ್ನು ನೋಡದೆ ಆತನ ಪ್ರಾರ್ಥನೆಯಲ್ಲಿಯೇ ಮುಳುಗಿಹೋಗಿದ್ದಾರೆ. ಪ್ರಾರ್ಥನೆ ಕೋರಿಕೆ ಗಳಿಗಾಗಿಯೇ ಮಾಡುತ್ತಿದ್ದಾರೆ. ಪ್ರಾರ್ಥನೆ ಕೊನೆಯಲ್ಲಿ ಎಷ್ಟೋ ಕೋರಿಕೆಗಳನ್ನು ಯೇಸುನನ್ನು ಕೋರುತ್ತಿದ್ದಾರೆ. ಯೇಸುನನ್ನು ಕೆಲವರು ತಂದೆಯೆಂದು ಸಂಬೋಧಿಸಿದಾಗ, ಕೆಲವರು ತಮ್ಮ ಸೋದರನಾಗಿ ಹೇಳುತ್ತಿದ್ದಾರೆ. ಯೇಸುನನ್ನೇ ಯೆಹೋವಾಯೆಂದು, ಯೇಸುನನ್ನೇ ಪರಮಾತ್ಮಯೆಂದು, ಯೇಸುನನ್ನೇ ಅಲ್ಲಾಹ್ ಎಂದು ಪೂರ್ತಿ ದೈವ ಭಾವನೆಯೊಂದಿಗೆ ನೋಡುತ್ತಿಲ್ಲ. ಯೇಸು ತನ್ನ ಜೀವನದಲ್ಲಿ ಹೇಳಿರುವ ಜ್ಞಾನವನ್ನು ಅರ್ಥಮಾಡಿಕೊಂಡರೇ ಮನುಷ್ಯರು ಜ್ಞಾನಿಗಳಾಗಿ ಬದಲಾಗಬಲ್ಲರು. ಆಗ ನಾವು ಹೇಳಿರುವುದು ಕೂಡಾ ನಿಜವೆಂದು ನಿಮಗೆ ಅರ್ಥವಾಗಬಲ್ಲದು.

**ಪ್ರಶ್ನೆ:– ಯೇಸು ತನ್ನ ಜೀವನವನ್ನಲ್ಲದೇ ಹೋದರೂ ಆತನ ಮರಣವನ್ನು ಕುರಿತು ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸ್ವಲ್ಪ ಹೇಳುವುದು ನಡೆದಿದೆ. ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆಂದರೇ ಅದು ಮಹಾ ಜ್ಞಾನಿಯಾದ ಜಿಬ್ರಯೇಲ್ ಹೇಳಿರುವ ವಿಷಯವಾಗಿರುತ್ತದೆ. ಜಿಬ್ರಯೇಲ್ ಕೂಡಾ ಎಲ್ಲಾ**

**ಸತ್ಯವನ್ನೇ ಹೇಳಿರುತ್ತಾನೆ. ಆದರೇ ಬೈಬಲ್‌ನಲ್ಲಿ ಯೇಸು ಮರಣ ವಿಷಯವು ಒಂದು ವಿಧವಾಗಿ ಬರೆದಿರುವಾಗ, ಅದೇ ಖುರಾನ್ ಗ್ರಂಥದಲ್ಲಿ ಮತ್ತೊಂದು ವಿಧವಾಗಿ ಬರೆದಿದೆ. ಬೈಬಲ್‌ನಲ್ಲಿ ಯೇಸುನನ್ನು ಶಿಲುಬೆ ಮೇಲೆ ಶಿಕ್ಷಿಸಿರುವಾಗ, ಆತನು ಶಿಲುಬೆ ಮೇಲೆ ಮರಣಿಸಿದ್ದಾನೆಂದಿರುವಾಗ, ಖುರಾನ್ ಗ್ರಂಥದಲ್ಲಿ "ಯೇಸುನನ್ನು ಶಿಲುಬೆಗೆ ಏರಿಸಲೂ ಇಲ್ಲ, ಆತನು ಸಿಲುಬೆ ಮೇಲೆ ಮರಣಿಸಲೂ ಇಲ್ಲ" ಎಂದು ಬರೆಯಲಾಗಿದೆ. ಈ ವಿಧವಾಗಿ ಬೈಬಲ್‌ನಲ್ಲಿ ಇರುವುದನ್ನು ಅನುಸರಿಸಿ ಕ್ರೈಸ್ತರು ಮಾತನಾಡುತ್ತಿದ್ದರೆ, ಮುಸ್ಲಿಮ್‌ರು ತಮ್ಮ ಗ್ರಂಥದಲ್ಲಿ ಈ ವಿಷಯವಿದೆ ಎಂದು ಹೇಳದೇ ಬೈಬಲ್‌ನಲ್ಲಿನ ವಾಕ್ಯಗಳಿಂದಲೇ ಕ್ರೈಸ್ತರೊಂದಿಗೆ ವಾದಿಸುತ್ತಿದ್ದಾರೆ. ಬೈಬಲ್, ಖುರಾನ್ ಎರಡು ದೈವಗ್ರಂಥಗಳೇ ಆಗಿರುವುದರಿಂದ, ಅವೆರಡು ಇರುವ ಸತ್ಯವನ್ನೇ ತಿಳಿಸುವುದಾಗಿರುತ್ತದೆ ಹೊರತು ಮನುಷ್ಯರ ಮಧ್ಯೆ ಅನುಮಾನಗಳನ್ನು ಉದ್ಭವಿಸುವುದಿಲ್ಲ. ಅವುಗಳಲ್ಲಿ ಹೇಳಿರುವ ವಾಕ್ಯಗಳು ಮನುಷ್ಯರು ಸರಿಯಾಗಿ ಅರ್ಥಮಾಡಿಕೊಳ್ಳಲಾರದೇ ಇರಬಹುದೇ ಹೊರತು, ಅವುಗಳಲ್ಲಿ ಹೇಳಿರುವ ಜ್ಞಾನವು ನೂರಕ್ಕೆ ನೂರರಷ್ಟು ಸತ್ಯವಾಗಿಯೇ ಇರುತ್ತದೆಯೆಂದು ಅಂದುಕೊಳ್ಳುತ್ತಿದ್ದೇವೆ. ಅವುಗಳ ವಿವರವನ್ನು ತಿಳಿಸಿರೆಂದು ಕೋರುತ್ತಿದ್ದೇವೆ ಹೇಳಿರಿ?**

**ಉತ್ತರ :-** ಅಂತಿಮ ದೈವಗ್ರಂಥದಲ್ಲಿ ಕೆಲವು ವಿಷಯಗಳು ನಿಗೂಢವಾಗಿ ಹೇಳಿರುವುದರಿಂದ ಅದಕ್ಕೆ ಪ್ರತ್ಯೇಕವಾದ ಶಕ್ತಿ, ಜೀವ (ಜ್ಯೋತಿ) ಇದೆಯೆಂದು ಹೇಳಬಹುದು. ಆದ್ದರಿಂದ ಭಗವದ್ಗೀತೆ, ಬೈಬಲ್, ಖುರಾನ್ ಮೂರು ದೈವಗ್ರಂಥಗಳ ಶಕ್ತಿ ಯಾರಿಗೂ ಅರ್ಥವಾಗುವುದಿಲ್ಲ. ಅರ್ಥವಾದರೂ, ಆಗದಿದ್ದರೂ ಈ ಮೂರೂ ಶಕ್ತಿವಂತವಾದ ಗ್ರಂಥಗಳು. ಅದರಲ್ಲಿ ಯಾವ ಸಂಶಯವೂ ಇಲ್ಲ. ಯೇಸು ವಿಷಯ ಎದುರುಗಡೆ ಹೇಳಿದರೂ, ಅರ್ಥವಾಗದ ವಿಧವಾಗಿ ಇದೆಯೆಂದರೇ, ಅದರಲ್ಲಿ ತನಗೆ ಇಷ್ಟವಾದವನಿಗೇ ಅರ್ಥವಾಗುವಂತೆ, ತನಗೆ ಇಷ್ಟವಿಲ್ಲದವನಿಗೆ ಅರ್ಥವಾಗದಂತೆ ಇರುವಹಾಗೆ ಆ ಗ್ರಂಥ ಮಾಡುತ್ತಿದೆ. ಈಗ ಆ ಗ್ರಂಥಕ್ಕೆ ಇಷ್ಟವಾದವರಾಗಬೇಕೆಂದರೇ ಮೊದಲು ದೇವರಿಗೆ

ಇಷ್ಟವಾದವರಾಗಿ ಇರಬೇಕು. ಆಗಲೇ ನೀನು ಗ್ರಂಥಕ್ಕೂ ಅದರಲ್ಲಿನ ಜ್ಞಾನಕ್ಕೂ ಇಷ್ಟವಾದವನಾಗಿ ಬದಲಾಗಬಲ್ಲೆ. ಆಗಲೇ ಅಲ್ಲಿರುವ ಜ್ಞಾನವು ಅರ್ಥ ವಾಗಬಲ್ಲದು. ಹೊರಗೆ ಎಷ್ಟು ಹೆಸರು, ಪ್ರಖ್ಯಾತಿಗಳಿದ್ದರೂ, ಎಷ್ಟೋ ಜನರಲ್ಲಿ ದೊಡ್ಡಜ್ಞಾನಿ ಎಂದಾಗಲೀ, ಬೋಧಕನೆಂದಾಗಲೀ, ಗುರುವು ಎಂದಾಗಲೀ ಅನಿಸಿಕೊಂಡರೂ ಗ್ರಂಥಕ್ಕೆ ನೀನು ಒಪ್ಪಿಗೆಯಾಗದಿದ್ದರೇ ಅದರಲ್ಲಿನ ಒಂದು ಅಕ್ಷರವೂ ಸಹ ಅರ್ಥವಾಗುವುದಿಲ್ಲ. ಈಗ ಉದಾಹರಣೆಗೆ ಯೇಸು ಮರಣವನ್ನು ಕುರಿತು ಗ್ರಂಥದಲ್ಲಿ ಬರೆದಿರುವುದು ನೋಡಿದರೇ, ಅಂತಿಮ ದೈವಗ್ರಂಥವು ಎಂಥದ್ದೋ ನಿಮಗೆ ಸ್ವಲ್ಪವಾದರೂ ಅರ್ಥವಾಗಬಲ್ಲದು.

ಯೇಸು ವಿಷಯವು ಬೈಬಲ್‌ನಲ್ಲಿದೆ. ನಂತರ ಇಲ್ಲಿ ಖುರಾನ್‌ನಲ್ಲಿ ಕೂಡಾ ಇದೆ. ಮೊದಲು ಬಂದಿರುವ ಗ್ರಂಥಗಳನ್ನು ಖುರಾನ್ ಗ್ರಂಥವು ದೃಢೀಕರಿಸುತ್ತಿದೆ. ಆದ್ದರಿಂದ ಅಲ್ಲಿನ ವಿಷಯವು ಇಲ್ಲಿ ಸಹ ಇದೆ. ಆದರೂ ಅಲ್ಲಿ ಅರ್ಥವಾಗದವರಿಗೆ ಇಲ್ಲಿ ಸಹ ಅರ್ಥವಾಗುವುದಿಲ್ಲ. ಅಲ್ಲಿ ಅರ್ಥ ವಾದವರಿಗೆ ಇಲ್ಲಿ ಕೂಡಾ ಅರ್ಥವಾಗುವುದು. ಯೇಸು ವಿಷಯವು ಇಲ್ಲಿ ಖುರಾನ್ ಗ್ರಂಥದಲ್ಲಿ ಸೂರಾ4, ಆಯತ್ 157, 158 ರಲ್ಲಿ ಈ ವಿಧವಾಗಿ ಹೇಳಿದ್ದಾರೆ. ಅದನ್ನು ಈಗ ನೋಡೋಣ. **(4–157) "ಮರ್ಯಮರ ಕುಮಾರನಾದ ದೈವಪ್ರವಕ್ತ ಈಸಾನನ್ನು ನಾವು ಹತ್ಯೆಮಾಡಿದ್ದೇವೆ ಎನ್ನುವುದರಿಂದ, ಅವರು ಆತನ ಶಿಕ್ಷೆಯನ್ನು ನೋಡಿದ್ದಾರೆ. ನಿಜಕ್ಕು ಅವರು ಆತನನ್ನು ಸಾಯಿಸಲೂ ಇಲ್ಲ, ಶಿಲುಬೆ ಮೇಲಕ್ಕೆ ಏರಿಸಲೂ ಇಲ್ಲ. ನಿಜ ಏನೆಂದರೇ ಅವರಿಗಾಗಿ ಆತನನ್ನು ಹೋಲಿರುವ ವ್ಯಕ್ತಿ ರೂಪಿಸಲ್ಪಟ್ಟಿದ್ದಾನೆ. ಈಸಾ ವಿಷಯದಲ್ಲಿ ವಿಭೇದಿಸಿದವರು ಆತನ ವ್ಯವಹಾರದಲ್ಲಿ ಸಂದೇಹಕ್ಕೆ ಗುರಿಯಾಗಿದ್ದಾರೆ. ಊಹೆಗಳನ್ನು ಅನುಸರಿಸುವುದು ಹೊರತು ಅವರಿಗೆ ಈ ವಿಷಯವಾಗಿ ಖಚಿತವಾಗಿ ಏನೂ ತಿಳಿದಿಲ್ಲ. ಅಸಲು ಅವರು ಆತನನ್ನು ಕೊಲ್ಲಲಿಲ್ಲ." (4–158) "ಮೇಲಾಗಿ ದೇವರು ತನ್ನಕಡೆ ಆತನನ್ನು ಎತ್ತಿಕೊಂಡಿದ್ದಾನೆ. ದೇವರು ಸರ್ವಾಧಿಕಾರಿ, ಮಹಾವಿವೇಕಿ",** ಇಷ್ಟೇಅಲ್ಲದೇ ಮತ್ತೊಂದುಕಡೆ ಯೇಸುನನ್ನು, ಯೇಸು ವಿಷಯವನ್ನು ಕುರಿತು

4ನೇ ಸೂರಾದಲ್ಲಿಯೇ 171ನೇ ಆಯತ್‌ನಲ್ಲಿ ಹೀಗೆ ಹೇಳುತ್ತಿದ್ದಾರೆ ನೋಡಿ. **(4–171) "ನೀವು ಧರ್ಮದ ವಿಷಯದಲ್ಲಿ, ಹದಮೀರಬೇಡಿ, ಸತ್ಯ ಹೊರತು ಅಲ್ಲಾಹ್‌ಗೆ ಮತ್ತೊಂದು ಮಾತಾದ ಅಸತ್ಯವನ್ನು ಆರೋಪಿಸಬೇಡಿ. ಮರ್ಯಮರ ಕುಮಾರನಾದ ಈಸಾ ಕೇವಲ ದೈವಪ್ರವಕ್ತ. ಅಷ್ಟೇ ಅಲ್ಲದೇ ಆತನು ಸಾಧಾರಣ ಪ್ರವಕ್ತನಲ್ಲ, ದೇವರ ಆಜ್ಞೆಯಿಂದ ದೈವ ಆದೇಶದ ಮೂಲಕ ಹುಟ್ಟಿಸಲ್ಪಟ್ಟ ಆತ್ಮ. ಆ ಆತ್ಮವನ್ನು ಮರಿಯಮ್ ಕಡೆ ಮರಳಿಸಿ ಪ್ರಯೋಗಿಸಿದ್ದಾನೆ. ಇನ್ನೂ ಆತನು ದೇವರ ಹತ್ತಿರದಿಂದ ಬಂದ ಆತ್ಮ ಮಾತ್ರವೇ. ಆದ್ದರಿಂದ ನೀವು ದೇವರನ್ನು, ಆತನು ಕಳಿಸಿದ ಪ್ರವಕ್ತರನ್ನು ಎಲ್ಲರನ್ನು ವಿಶ್ವಾಸಿಸಿರಿ. ದೇವರು ಮೂವರು ಅನ್ನಬೇಡಿ. ದೇವರು ಒಬ್ಬನೇ ಮೂವರು ಅಲ್ಲ. (ತ್ರಿತ್ವ ವಾದನೆಯನ್ನು ಮಾಡಬೇಡಿರಿ) ಇದರಲ್ಲಿಯೇ ನಿಮಗೆ ಒಳ್ಳೇಯದಾಗುತ್ತದೆ. ಆರಾಧ್ಯನಾದ ದೇವರು (ಅಲ್ಲಾಹ್) ಒಬ್ಬನು ಮಾತ್ರವೇ. ಆತನಿಗೆ ಕುಮಾರನಿದ್ದಾನೆಂಬ ವಿಷಯಕ್ಕೆ ದೇವರು ಅತೀತನು, ಪರಿಶುದ್ಧನು. ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಇರುವುದೆಲ್ಲಾ ಆತನಿಗೆ ಸೇರಿರುವುದೇ. ಕಾರ್ಯನಿರ್ವಾಹಕಾರಿಯಾಗಿ ದೇವರು ಒಬ್ಬನೇ ಸಾಕು."**

ಇಲ್ಲಿ ಮೂರು ಆಯತ್‌ಗಳು ಹೇಳಲ್ಪಟ್ಟಿದೆ. ಅದರಲ್ಲಿ ಕೊನೆಯಲ್ಲಿ ಹೇಳಿದ 171ನೇ ಆಯತ್‌ನ್ನು ಮೊದಲು ಗ್ರಹಿಸಲ್ಪಟ್ಟರೆ ಮೇಲಿನ ಎರಡು ವಾಕ್ಯಗಳು ಸುಲಭವಾಗಿ ಅರ್ಥವಾಗುವುದಕ್ಕೆ ಅವಕಾಶ ಇದೆ. ಧರ್ಮ ಎಂದರೇ ಮೊದಲು ಸ್ವಲ್ಪ ತಿಳಿದಿದ್ದರೆ ಅದನ್ನು ಕುರಿತು ತಪ್ಪಾಗಾಗಲಿ, ಅಸತ್ಯವಾಗಾಗಲಿ ಹೇಳಿಕೊಳ್ಳುವುದಕ್ಕೆ ಅವಕಾಶ ಇರುವುದಿಲ್ಲ. ದೇವರು ಕಾರ್ಯಗಳನ್ನು ಮಾಡುವುದಿಲ್ಲ. ಆತನು ಮಾಡಿಸುವ ಆಜ್ಞೆ ಮಾತ್ರವೇ ಆಗಿದ್ದಾನೆ. ಅಂಥವನು ತನ್ನ ಆಜ್ಞೆಯಿಂದ ತನ್ನ ಆತ್ಮವನ್ನೇ ಯೇಸುವಾಗಿ ಕಳಿಸಿದ್ದಾನೆನ್ನುವುದಕ್ಕೆ ಸಾಕ್ಷಿಯಾಗಿ, "ಯೇಸು ದೇವರ ಹತ್ತಿರದಿಂದ ಬಂದಿರುವ ಆತ್ಮ ಮಾತ್ರವೇ" ಎಂದು ವಾಕ್ಯದಲ್ಲಿದೆ. ಇದರಿಂದ ದೇವರು ಕಳಿಸಿದ ಈಸಾ ಅಥವಾ ಯೇಸು ಸ್ವತಃವಾಗಿ ದೇವರು ಕಳಿಸಿದ ಆತನ ಆತ್ಮವೇ ಎಂದು ತಿಳಿಯಬಲ್ಲದು. ಅದರಿಂದ ಆತನು ಎಲ್ಲರ ಪ್ರವಕ್ತರಂತಹ ಪ್ರವಕ್ತ ಅಲ್ಲ. ದೇವರ ಆಜ್ಞೆಯಿಂದ ಬಂದವನೆಂದು ತಿಳಿದುಹೋಗಿದೆ.

15ನೇ ಸೂರಾ 29ನೇ ಆಯತ್‌ನಲ್ಲಿ ಹೇಳಿದಂತೆ **ದೇವರು ತನ್ನ ಆತ್ಮವನ್ನೇ ಯೇಸುನನ್ನಾಗಿ ಕಳಿಸಿದ್ದಾನೆ.** ಆದರೆ ಆ ವಿಷಯ ಮನುಷ್ಯರಿಗೆ ತಿಳಿದಿಲ್ಲ. ಯೇಸು ಬಂದು ತಂದೆ, ಕುಮಾರನು, ಪರಿಶುದ್ಧಾತ್ಮ ಎಂದು ತ್ರಿತ್ವವನ್ನು ಹೇಳಿದ್ದಾನೆ. ಆದರೂ 'ಪರಿಶುದ್ಧಾತ್ಮಯೇ ದೇವರು' ಎಂದು ಹೇಳಿದ್ದಾನೆ. ಆದರೆ ಆ ಮಾತು ಮನುಷ್ಯರಿಗೆ ಅರ್ಥವಾಗಲಿಲ್ಲ. ಆತನು (ಯೇಸು) ಬದುಕಿದ 33 ವರ್ಷಗಳಲ್ಲಿ ಯಾರಿಗೂ ಅರ್ಥವಾಗಲಿಲ್ಲ. ಕೊನೆಯಲ್ಲಿ ಆತನು ಒಂದು ಶಿಕ್ಷೆಗೆ ಗುರಿ ಆಗಿದ್ದಾನೆ. ಯೇಸುನನ್ನು ಶಿಲುಬೆ ಮೇಲೆ ನೇತಾಕುವುದೇ ಆ ದಿನ ಆತನಿಗೆ ಹಾಕಿರುವ ಶಿಕ್ಷೆ. ಆದರೇ ಆತನು ವಾಸ್ತವವಾಗಿ ಶಿಕ್ಷಾರ್ಹನಲ್ಲ. ಅಂಥಹ ಸಮಯದಲ್ಲಿ ಜನರ ದೃಷ್ಟಿಯಲ್ಲಿ ಆತನು ಶಿಕ್ಷಾರ್ಹನು. ದೇವರ ದೃಷ್ಟಿಯಲ್ಲಿ ಶಿಕ್ಷಾರ್ಹನು ಅಲ್ಲ. ಈ ಎರಡೂ ನಡೆಯಬೇಕು. ಜನರ ಅಜ್ಞಾನದ ಪ್ರಕಾರ ಆತನನ್ನು ಶಿಲುಬೆಯನ್ನು ಏರಿಸಿ ಶಿಕ್ಷೆಯನ್ನು ಹಾಕಿದ್ದಾರೆ. ಆಗ ಯೇಸು ಯೇಸುನಂತೆ ಇಲ್ಲ. **ಯೇಸುವನ್ನು ಸೈನಿಕರು ಹಿಡಿದುಕೊಂಡಾಗಿನಿಂದ ಶಿಲುಬೆಗೆ ಹಾಕುವವರೆಗು ಒಂದು ದೊಡ್ಡ ಮಾಯೆ ನಡೆದಿದೆ.** ಅದನ್ನು ತಿಳಿದವರೆ 'ಮಾಯೆ' ಎನ್ನುತ್ತಾರೆ. ತಿಳಿಯದವರು ನಡೆದಿರುವುದೇ ಸತ್ಯ ಎನ್ನುತ್ತಾರೆ. ಇಲ್ಲಿ ವಾಕ್ಯದಲ್ಲಿ "ಯೇಸುನನ್ನು ಶಿಲುಬೆಗೆ ಏರಿಸಲೂ ಇಲ್ಲ. ನಿಜಕ್ಕೆ ಅವರು ಆತನನ್ನು ಸಾಯಿಸಲು ಇಲ್ಲ" ಎಂದು ಹೇಳಿದ್ದಾರೆ. ಈ ವಾಕ್ಯವನ್ನು ಹೇಳಿರುವುದು ಮಹಾಜ್ಞಾನಿಯಾದ ಜಿಬ್ರಯೇಲ್. ಆತನು ಹೇಳಿದ ವಾಕ್ಯ ಎಂದಿಗೂ ಅಸತ್ಯವಾಗುವುದಿಲ್ಲ, ಪೂರ್ತಿ ಸತ್ಯವೇ. ಆದ್ದರಿಂದ 4–171ನೇ ವಾಕ್ಯದಲ್ಲಿ ಮೊದಲಿನಲ್ಲಿಯೇ **"ನೀವು ಧರ್ಮದ ವಿಷಯದಲ್ಲಿ ದೇವರ ಮಾತಿಗೆ ಅಸತ್ಯವನ್ನು ಆರೋಪಿಸಬೇಡಿ"** ಎಂದಿದ್ದಾರೆ. ಈ ವಿಷಯವನ್ನು ದೇವರ ಆಜ್ಞೆಯಿಂದ ಜಿಬ್ರಯೇಲ್ ಹೇಳಿದ್ದಾನೆ. ಆ ವಿಷಯದಿಂದ ಜಿಬ್ರಯೇಲ್‌ಗೆ ಕೆಲಸವಿಲ್ಲ, ಹೇಳಬೇಕಾದ ಅವಶ್ಯಕತೆಯು ಇಲ್ಲ. ಆದರೂ ಹೇಳಿದ್ದಾನೆ ಎಂದರೇ, ಖುರ್‌ಆನ್ ಜ್ಞಾನ ಯೇಸು ಹೇಳಿದ ಜ್ಞಾನವನ್ನು ಸಹ ಸಮರ್ಥಿಸುತ್ತಿದೆ, ಧೃಢೀಕರಿಸುತ್ತಿದೆ. ಆದ್ದರಿಂದ ಯೇಸು ವಿಷಯವನ್ನು ತಪ್ಪದೆ ತಿಳಿಯಬೇಕಾಗಿದೆ. ಹಾಗೆ ತಿಳಿಯದೆಹೋದರೆ ಆತನನ್ನು ಊಹಾಪೋಹಗಳಲ್ಲಿ ಮುಳುಗಿಸುವುದಲ್ಲದೆ, ಆತನ ಜ್ಞಾನವನ್ನು ಸಹ ಊಹಾಪೋಹಗಳಲ್ಲಿ

ಮುಳುಗಿಸುತ್ತಾರೆ. ಆದ್ದರಿಂದ ಯೇಸು ಮರಣವನ್ನು ಕುರಿತು ಜಿಬ್ರಯೇಲ್ ತಪ್ಪದೆ ಹೇಳಬೇಕಾಗಿ ಬಂದಿದೆ. ಈಗ ತಪ್ಪದೆ ನಾವು ಸಹ ಹೇಳಿಕೊಳ್ಳಬೇಕಾಗಿ ಬಂದಿದೆ.

ಈಗಾಗಲೇ ಆ ದಿನ ಏನು ನಡೆದಿದೆಯೋ ತಿಳಿಯದೆ ಒಂದುಕಡೆ ಕ್ರೈಸ್ತರು ಒಂದು ವಿಧವಾಗಿ ಹೇಳುತ್ತಿದ್ದಾರೆ. ಮತ್ತೊಂದು ಕಡೆ ಮುಸ್ಲಿಮ್‌ರು ಮತ್ತೊಂದು ವಿಧವಾಗಿ ಹೇಳುತ್ತಿದ್ದಾರೆ. ಕ್ರೈಸ್ತರು ಬೈಬಲ್‌ನಲ್ಲಿ ಬರೆದ ವಿಧವಾಗಿ, ಆ ದಿನ ಪ್ರತ್ಯಕ್ಷ ಸಾಕ್ಷಿಗಳು ನೋಡಿರುವುದನ್ನು ಬರೆದಿರುವುದನ್ನು ಹೇಳುತ್ತಿದ್ದಾರೆ. ಅಲ್ಲಿಯವರೆಗು ಅವರದು ತಪ್ಪಿಲ್ಲ. ಆದರೆ ಅಲ್ಲಿ ಅವರಿಗೆ ತಿಳಿಯದಿರುವುದು ಯೇಸು ಮರಣಿಸುವುದಿಲ್ಲ ಎಂಬ ವಿಷಯ. ಅವರು ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆಂದು, ನಂತರ ಮೂರನೆ ದಿನ ಭಾನುವಾರ ಬೆಳಿಗ್ಗೆ ಬದುಕಿ ಬಂದಿದ್ದಾನೆಂದು ಹೇಳುತ್ತಿದ್ದಾರೆ. **ಇಲ್ಲಿ ಯೇಸು ಮರಣಿಸಿದ್ದಾನೆನ್ನುವುದು ಕ್ರೈಸ್ತರದು ತಪ್ಪು. ಅಲ್ಲಿಯವರೆಗು ಯೇಸುಗೆ ಶಿಕ್ಷೆ ಹಾಕಿರುವುದು, ಆತನನ್ನು ಶಿಲುಬೆ ಏರಿಸಿರುವುದು ಎಲ್ಲಾ ಅವರು ಹೇಳಿರುವುದು ಒಂದು ವಿಧವಾಗಿ ನಿಜವೇ. ಆದರೆ ಮುಸ್ಲಿಮ್‌ರು ತಮ್ಮ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ ಎಂದು, ಯೇಸು ಮರಣಿಸಲಿಲ್ಲ ಎಂದು ಹೇಳುತ್ತಿದ್ದಾರೆ. ಅವರ ಗ್ರಂಥದಲ್ಲಿ ಜಿಬ್ರಯೇಲ್ ಮೇಲಿನ ವಾಕ್ಯದಲ್ಲಿ ಹೇಳಿದಂತೆ ನಿಜಕ್ಕೆ ಅವರು ಆತನನ್ನು ಸಾಯಿಸಲಿಲ್ಲ ಎಂಬ ಮಾತು ವಾಸ್ತವವೇ. ಆದರೇ ಯೇಸುಗೆ ಶಿಕ್ಷೆ ಹಾಕಲಿಲ್ಲ, ಶಿಲುಬೆಗೆ ಏರಿಸಲೂ ಇಲ್ಲ ಎಂಬಮಾತು ಒಂದು ವಿಧವಾಗಿ ಪೂರ್ತಿ ತಪ್ಪು.** ಆದರೆ ಈಗ ನಾವು ಹೇಳಿರುವುದು ಸ್ವಲ್ಪ ಆಕಡೆ, ಸ್ವಲ್ಪ ಈಕಡೆ ಹೇಳಿ ಯಾವುದು ಸಂಬಂಧ ಇಲ್ಲದಹಾಗೆ ಹೇಳಿದಂತೆ ಕಾಣಿಸುತ್ತಿದೆ ಅಲ್ಲವೆ! ಹಾಗೆಯೇ ಕಾಣಿಸುತ್ತದೆಯೆಂದು ನಮಗು ತಿಳಿದಿದೆ. ಆದರೂ ಎಲ್ಲ ತಿಳಿದು ಈ ಮಾತು ನಾವು ಹೇಳಿದ್ದೇವೆ. ಈಕಡೆ ಕ್ರೈಸ್ತರು ಹೇಳುವುದರಲ್ಲಿ ಸ್ವಲ್ಪ ಸತ್ಯವಿದೆ. ಆಕಡೆ ಮುಸ್ಲಿಮ್‌ರು ಹೇಳುವ ಮಾತಿನಲ್ಲಿ ಸ್ವಲ್ಪ ಸತ್ಯವಿದೆ. ಆದರೂ ಅವರದು ಯಾವುದು ಸತ್ಯವೋ, ಯಾವುದು ಸತ್ಯವಲ್ಲವೋ ಅವರಿಗೇ ಸರಿಯಾಗಿ ತಿಳಿದಿಲ್ಲ. ಆ ಕಾಲದಲ್ಲಿ ಏನು ನಡೆದಿದೆ,

ನಡೆದಿರುವುದು ಯಾವುದು ಸತ್ಯ, ಯಾವುದು ಅಸತ್ಯ ಎಂದು ತಿಳಿಯಬೇಕೆಂದರೇ ಈಗ ನಾವು ಅಲ್ಲಿಗೆಹೋಗಿ ವಿವರಿಸಿಕೊಳ್ಳೋಣ.

ಆ ದಿನ ಗುರುವಾರ ರಾತ್ರಿ ಯೇಸು ಆತನ ಶಿಷ್ಯರು ಹನ್ನೊಂದುಜನರು "ಗೆತ್ಸೇ" ಎನ್ನುವ ಸ್ಥಳಕ್ಕೆ ಪ್ರಾರ್ಥನೆ ಮಾಡುವುದಕ್ಕೆ ಬಂದು, ಆತನ ಶಿಷ್ಯರೆಲ್ಲರನ್ನು ಒಂದುಕಡೆ ಕೂರಿಸಿ, ಸ್ವಲ್ಪ ದೂರಹೋಗಿ ಒಂದುಕಡೆ ಒಬ್ಬನೇ ಪ್ರಾರ್ಥನೆ ಮಾಡುತ್ತಿದ್ದನು. ಆದರೂ ಆತನ ಶಿಷ್ಯರು ನಿದ್ರೆಹೋಗುತ್ತಿರುವಾಗ, ಎರಡು ಸಲ ಅವರ ಹತ್ತಿರಕ್ಕೆ ಬಂದು ಅವರನ್ನು ಎಬ್ಬಿಸಿ ಎಚ್ಚರವಾಗಿರಿ ಎಂದು ಹೇಳಿ ಮೂರನೆ ಸಲ ಆತನು ಪ್ರಾರ್ಥನೆ ಮಾಡುವುದಕ್ಕೆ ಹೋಗಿದ್ದಾನೆ. ಆಗ ಅರ್ಧರಾತ್ರಿ ಆಗಿರುವುದರಿಂದ ಪ್ರಾರ್ಥನೆ ಮಾಡುತ್ತಾ ಯೇಸು ಸಹ ನಿದ್ರೆಯೊಳಗೆ ಹೋಗಿದ್ದಾನೆ. ಯೇಸು ನಿದ್ರೆ ಹೋದ ವಿಷಯ ಇಂದಿಗೂ ಯಾರಿಗೂ, ಯಾವ ಕ್ರೈಸ್ತನಿಗು ತಿಳಿದಿಲ್ಲ. ಯಾರಿಗೂ ತಿಳಿಯದಿರುವುದು ನಿನಗೆ ಹೇಗೆ ತಿಳಿದಿದೆ? ಎಂಬ ಪ್ರಶ್ನೆ ನಿಮಗೆ ಬರಬಹುದು. ಅಲ್ಲಿಯೇ ಇರುವ ನನಗೆ ಏಕೆ ತಿಳಿದಿಲ್ಲ ಎಂದು ನನ್ನಲ್ಲಿರುವವನು ಕೇಳಿದರೆ ನೀವೇನು ಹೇಳುತ್ತೀರಾ? ಆದ್ದರಿಂದ ಕೇಳಿರಿ, ಪ್ರಶ್ನಿಸಬೇಡಿ. ಇಲ್ಲಿ ನಮಗೆ ಬೇಕಾಗಿರುವುದು ಸತ್ಯ, ವಿಶ್ವಾಸ. ವಿಶ್ವಾಸವಿಟ್ಟು ಕೇಳಿರಿ ಸತ್ಯ ತಿಳಿಯುತ್ತದೆ. ಯೇಸುನನ್ನು ಯೂದಾ ಆ ರಾತ್ರಿ ಹಿಡಿದುಕೊಟ್ಟಿದ್ದಾನೆ. ಆಗ ಯೇಸು ನಿದ್ರೆಯಲ್ಲಿ ಇದ್ದರೂ ಆತನ ಶರೀರ ದೇವರು ಕಳಿಸಿದ ಆತ್ಮದಿಂದ ಎಚ್ಚರವಾಗಿದೆ. ಅಲ್ಲಿಗೆ ಬಂದಿರುವ ಸೈನಿಕರು ಯೇಸುನನ್ನು ಹಿಡಿದುಕೊಂಡಿದ್ದೇವೆಂದುಕೊಂಡಿದ್ದಾರೆ ಆದರೆ, ಅವರು ಯೇಸು ಶರೀರವನ್ನು ಹಿಡಿದುಕೊಂಡಿದ್ದಾರೆ. ಯೇಸು ನಿದ್ರೆಯಲ್ಲಿ ಒಳಗಿದ್ದಾನೆ. ಹೊರಗಿನ ಗಮನ ಯೇಸುಗೆ ಸ್ವಲ್ಪವೂ ಇಲ್ಲ. ಆಗ ಯೇಸು ಶರೀರವನ್ನು ನಡೆಸುವವನು ಆತ್ಮವೇ. ಆತ್ಮವೇ ಎಲ್ಲರನ್ನು ನಡೆಸುತ್ತಿದ್ದರೂ, ಯೇಸುನನ್ನು ಸಹ ಅಲ್ಲಿಯವರೆಗೂ ಆತ್ಮವೇ ನಡೆಸಿದರೂ ಯೇಸು ಎಚ್ಚರದಲ್ಲಿ ಇರುತ್ತಿದ್ದನು. ಆದರೇ ಆಗ ಯೇಸು ಜ್ಞಾಪಕದಲ್ಲಿ ಇಲ್ಲ. ಆದ್ದರಿಂದ ಮೇಲೆ ಏನು ನಡೆದಿರುವುದು ಯೇಸುಗೆ ಏನೂ ತಿಳಿದಿಲ್ಲ. ಎಲ್ಲರ ಶರೀರಗಳನ್ನೂ ಆತ್ಮವೇ ನಡೆಸುತ್ತಿದೆ. ಆದರೆ ಎಲ್ಲರಿಗೂ ಜ್ಞಾಪಕವಿದ್ದು

ಎಚ್ಚರದಲ್ಲಿದ್ದಾರೆ, ಆದ್ದರಿಂದ ಹೊರಗೆ ಏನು ನಡೆಯುತ್ತಿರುವುದು ಶರೀರದಲ್ಲಿನ ಜೀವಿಗೆ ತಿಳಿದಿದೆ. ಆದರೇ ಇಲ್ಲಿ ಯೇಸು ಪೂರ್ತಿ ನಿದ್ರೆಯಲ್ಲಿ ಇದ್ದಾನೆ. ಹೊರಗೆ ನಡೆಯುವ ತತಂಗ ಆತನಿಗೆ ಸ್ವಲ್ಪವೂ ತಿಳಿದಿಲ್ಲ. ಈ ವಿಷಯವನ್ನು ತಿಳಿಯದ ಮನುಷ್ಯರು, ಸೈನಿಕರು ಯೇಸುನನ್ನು ಹಿಡಿದುಕೊಂಡಿದ್ದೇವೆ ಅಂದುಕೊಂಡಿದ್ದಾರೆ. ಆದರೆ ಆತನ ಶರೀರವನ್ನು ಮಾತ್ರ ಹಿಡಿದುಕೊಂಡಿದ್ದಾರೆ. ಆಗಿನಿಂದ ಶಿಲುಬೆಗೆ ಹಾಕುವವರೆಗು ದೊಡ್ಡಮಾಯೆ ನಡೆದಿದೆ ಎಂದು ಮೊದಲೇ ಹೇಳಿದ್ದೇವೆ! ಆಗಿನಿಂದ ಯೇಸು ಮೌನವಾಗಿ ಇರುತ್ತಾ ಎರಡು ಮೂರು ಮಾತುಗಳಿಗಿಂತ ಹೆಚ್ಚಾಗಿ ಮಾತನಾಡಲಿಲ್ಲ. ಹೆಚ್ಚಾಗಿ ಮೌನವಾಗಿರುವವನು, ಎರಡು ಮೂರು ಮಾತುಗಳು ಮಾತನಾಡಿದವನು ಯೇಸು ಅಲ್ಲವೆಂದು ಯಾರಿಗೂ ತಿಳಿದಿಲ್ಲ.

ಕೊನೆಗೆ ಯೇಸುನಿಂದ ಶಿಲುಬೆಯನ್ನು ಹೊರಿಸಿಕೊಂಡುಹೋಗಿ ಆತನನ್ನು ಶಿಲುಬೆಗೆ ಏರಿಸಿ ಶಿಕ್ಷೆಯನ್ನು ಹಾಕಿದ್ದಾರೆ. ಆದರೇ ಶಿಲುಬೆಯನ್ನು ಏರಿಸಿರುವುದು ಶಿಕ್ಷೆ ಹಾಕಿರುವುದು ಯೇಸುಗೆ ಎಂದು ಎಲ್ಲರೂ ಅಂದು ಕೊಂಡಿದ್ದಾರೆ ಹೊರತು, ಯೇಸುಗೆ ಆ ಶಿಕ್ಷೆ ಹಾಕಲಿಲ್ಲ. ಆತನ ಶರೀರಕ್ಕೆ ಶಿಕ್ಷೆ ಹಾಕಿದ್ದಾರೆಂದು ಗ್ರಹಿಸಲಾರದೆಹೋಗಿದ್ದಾರೆ. ಆದ್ದರಿಂದ ಖುರ್‌ಆನ್‌ನಲ್ಲಿನ 4–157 ರಲ್ಲಿನ ವಾಕ್ಯದಲ್ಲಿ **"ಅವರು ಆತನನ್ನು ಸಾಯಿಸಲೂ ಇಲ್ಲ, ಶಿಲುಬೆಯನ್ನು ಏರಿಸಲೂ ಇಲ್ಲ"** ಎಂದು ಬರೆದಿದ್ದಾರೆ. ಜಿಬ್ರಯೇಲ್ ಹೇಳಿದ ಈ ಮಾತು ನೂರಕ್ಕೆ ನೂರುಪಾಲು ನಿಜವೇ. ಆದರೇ ಕ್ರೈಸ್ತರು ಪ್ರತ್ಯಕ್ಷವಾಗಿ ನೋಡಿದ್ದಾರೆ ಆದ್ದರಿಂದ ಶಿಲುಬೆಯನ್ನು ಏರಿಸಿರುವುದು, ಶಿಕ್ಷ ಹಾಕಿರುವುದು ಅವರ ಲೆಕ್ಕದಲ್ಲಿ ಸತ್ಯವೇ. ಯೇಸುನನ್ನು ಶಿಲುಬೆ ಮೇಲೆ ಏರಿಸಿದ ನಂತರ ಸ್ವಲ್ಪ ಸಮಯಕ್ಕೆ ಯೇಸು ಶರೀರದಲ್ಲಿನ ಆತ್ಮ ಚಲನೆ ಇಲ್ಲದೆ ನಾಟಕೀಯವಾಗಿ ನಿಂತುಹೋಗಿದೆ. ಆಗ ಅಲ್ಲಿರುವವರೆಲ್ಲರೂ ಯೇಸು ಮರಣಿಸಿದ್ದಾನೆಂದುಕೊಂಡಿದ್ದಾರೆ. ಶರೀರ ದಲ್ಲಿನ ಆತ್ಮ ತನ್ನ ಆರು ನಾಡೀಕೇಂದ್ರಗಳನ್ನು ನಿಲ್ಲಿಸಿ ಏಳನೆ ನಾಡೀಕೇಂದ್ರದಲ್ಲಿ ಇರುವುದರಿಂದ ಅಲ್ಲಿಯವರೆಗೂ ಕದಲುತ್ತಿರುವ ಶರೀರ ಕದಲದಂತೆ ನಿಂತುಹೋಗಿದೆ. ಆಗ ಶರೀರದಲ್ಲಿ ಜೀವ ಇದೆಯೆಂದು ಯಾರು ತಿಳಿಯುತ್ತಾರೆ?

ಆ ಸಮಯದಲ್ಲಿ ಎಲ್ಲಾ ನಿಂತುಹೋಗಿ, ಶ್ವಾಸ ಆಡದೆ ರಕ್ತಪ್ರಸರಣ ಕೂಡಾ ನಿಂತುಹೋಗಿರುವುದರಿಂದ ಎಲ್ಲರೂ ಶರೀರ ಸತ್ತಹೋಗಿದೆಯೆಂದು ಹೇಳುತ್ತಾರೆ. ಆ ವಿಧವಾಗಿಯೇ ಕ್ರೈಸ್ತರೆಲ್ಲರೂ 'ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆ' ಎಂದು ಅಂದುಕೊಳ್ಳುತ್ತಿದ್ದಾರೆ. ನಿಜಕ್ಕೆ 'ಯೇಸು ಶಿಲುಬೆಮೇಲೆ ಮರಣಿಸಲಿಲ್ಲ' ಎಂಬ ಮಾತೇ ನಿಜವಾಗುತ್ತದೆ. ಮರಣವನ್ನು ಕುರಿತು ಬಹಳಜನರಿಗೆ ತಿಳಿಯುತ್ತದೆ ಆದರೆ, ತಾತ್ಕಾಲಿಕ ಮರಣವನ್ನು ಕುರಿತು ಯಾರಿಗೂ ತಿಳಿದಿಲ್ಲ. ಯೇಸು ಆ ಸಮಯದಲ್ಲಿ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು ಯಾರೂ ಗ್ರಹಿಸಲಿಲ್ಲ. ಅಂತಹ ಮರಣ ಒಂದಿದೆಯೆಂದಾಗಲಿ, ಅಂತಹ ಮರಣವನ್ನು ಹೊಂದಿದವರು ಸ್ವಲ್ಪ ಸಮಯ ಅಥವಾ ಸ್ವಲ್ಪಕಾಲ, ಅಥವಾ ಕೆಲವು ದಿನಗಳು ಮರಣಿಸಿ ಪುನಃ ಪ್ರಾಣದಿಂದ ಬದುಕುತ್ತಾರೆಂದು ಯಾರಿಗೂ ತಿಳಿದಿಲ್ಲ. ಈ ನಮ್ಮ ಮಾತು ನಿಜವೆನ್ನುವುದಕ್ಕೆ ಉದಾಹರಣೆಯಾಗಿ ಒಂದು ನಡೆದ ವಿಷಯವನ್ನು ನೋಡಿರಿ.

## (ಜಮ್ಮು, ಕಾಶ್ಮಿರ್‌ನಲ್ಲಿನ ಅಬ್ದುಲ್ ಅಜೀಜ್ ಕಥೆ)

2009 ಡಿಸೆಂಬರ್ 7ನೇ ತಾರೀಖು ಟಿವಿ9 ನಲ್ಲಿ ಮಧ್ಯಾಹ್ನ 1–30 ನಿಮಿಷಗಳಿಗೆ ಒಂದು ಕಥನ ಪ್ರಸಾರವಾಗಿದೆ. ಅದೇನೆಂದರೆ! ಅಲ್ಲಿಗೆ ವಾರ ದಿನಗಳ ಕೆಳಗೆ ಎಂದರೆ 2009 ನವಂಬರ್, 30ನೇ ತಾರೀಖು ಜಮ್ಮು ಕಾಶ್ಮೀರ್‌ದಲ್ಲಿನ ರಾಜೌರಿ ಎನ್ನುವ ಗ್ರಾಮದಲ್ಲಿ ಅಬ್ದುಲ್ ಅಜೀಜ್ ಎನ್ನುವ 60 ವರ್ಷಗಳ ಮುದುಕನು ಮರಣಿಸಿದ್ದಾನೆ. ಆತನು ಮುಸ್ಲಿಮ್ ಆಗಿರುವುದರಿಂದ ಇಸ್ಲಾಮ್ ಸಂಪ್ರದಾಯದ ಪ್ರಕಾರ ಆತನನ್ನು ಭೂಮಿಯಲ್ಲಿ ಊತಿಡುವುದು ನಡೆದಿದೆ. ಆತನನ್ನು ಮಣ್ಣು ಮಾಡಿದ ಮೂರು ದಿನಗಳಿಗೆ ಆತನು ಸಾಧಾರಣವಾಗಿ ಮರಣಿಸಲಿಲ್ಲವೆಂದು, ಯಾರೋ ಹತ್ಯ ಮಾಡಿದ್ದಾರೆನ್ನುವ ಆರೋಪಣೆ ಪೊಲೀಸರಿಗೆ ಸೇರಿದೆ. ತಕ್ಷಣ ಪೊಲೀಸರು ಕೇಸು ಬರೆದುಕೊಂಡು ಸ್ಮಶಾನಕ್ಕೆ ಹೋಗಿ ಅಬ್ದುಲ್ ಅಜೀಜ್ ಶವವನ್ನು ಬಂಧುಗಳ ಸಮಕ್ಷಮದಲ್ಲಿಯೇ

ಹುಡುಕಿ ತೆಗೆದರು. ಹುಡುಕಿ ತೆಗೆದ ಅಬ್ದುಲ್ ಅಜೀಜ್ ಶರೀರವನ್ನು ಪೋಸ್ಟುಮಾರ್ಟಮ್ (ಶವಪರೀಕ್ಷೆ) ಗೋಸ್ಕರ ಸರ್ಕಾರಿ ಆಸ್ಪತ್ರೆಗೆ ಕಳುಹಿಸಿದ್ದಾರೆ. ಅದರಲ್ಲಿನ ಡಾಕ್ಟರ್ ಶವಪರೀಕ್ಷೆ ಮಾಡಲು ಪ್ರಾರಂಭಮಾಡಿದ್ದಾನೆ. ಮೊದಲು ತಲೆ ಭಾಗವನ್ನು ಪರೀಕ್ಷಿಸುವುದಕ್ಕೆ ತಲೆಮೇಲೆ ಚರ್ಮವನ್ನು ತೆಗೆಯುವುದಕ್ಕೆ ಕತ್ತಿಯಿಂದ ತಲೆ ಮೇಲೆ ಹೊಡೆಯುವುದು ನಡೆದಿದೆ. ತಲೆಮೇಲೆ ಗಾಯವಾಗಿದೆ. ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ ಅಲ್ಲಿಯವರೆಗೂ ಮರಣಿಸಿದ ಅಬ್ದುಲ್ ಅಜೀಜ್ ಎದ್ದು ಕುಳಿತುಕೊಂಡು ನನ್ನೇನು ಮಾಡುತ್ತಿದ್ದೀರೆಂದು ಪ್ರಶ್ನಿಸಿದನು. ಆಗ ಆತನು ಎದ್ದು ಕೇಳುವುದು ಡಾಕ್ಟರ್‌ಗಳಿಗೆ ನಂಬುವುದಕ್ಕೆ ಆಗಲಿಲ್ಲ. ಆದರೂ ಡಾಕ್ಟರ್‌ಗಳು ಆಶ್ಚರ್ಯವಾಗಿ ಆತನು ಕೇಳಿದ ಪ್ರಶ್ನೆಗಳಿಗೆ ನಿನ್ನನ್ನು ಶವಪರೀಕ್ಷೆ ಮಾಡುತ್ತಿದ್ದೇವೆ ಎಂದು ಹೇಳಿದರು. ಅದಕ್ಕೆ ಅಬ್ದುಲ್ ಅಜೀಜ್ ನಾನು ಬದುಕೇ ಇದ್ದೀನಲ್ಲವೆ! ಎಂದನು. ಅಷ್ಟರಲ್ಲಿ ಡಾಕ್ಟರ್‌ರವರು ಅಬ್ದುಲ್ ಅಜೀಜ್ ಸಂಬಂಧಿಕರಿಗೆ ವಿಷಯವನ್ನು ತಿಳಿಸಿದಾಗ, ಹೊರಗಿರುವ ಸಂಬಂಧಿಕರು ಬಂದು ಆತನನ್ನು ಕರೆದುಕೊಂಡು ಹೋಗುವುದು ನಡೆದಿದೆ. ಮೂರು ದಿನಗಳ ಕೆಳಗೆ ಅಬ್ದುಲ್ ಅಜೀಜ್ ಮರಣಿಸಿದಾಗ ಹದಿನೈದು ನಿಮಿಷಗಳ ನಂತರ ಪರೀಕ್ಷಿಸಿ ನೋಡಿ ಆತನು ಮರಣಿಸಿದಂತೆ ಹೇಳಿದ್ದೇನೆಂದು ಅಜೀಜ್ ವಿಷಯದಲ್ಲಿ ಅದ್ಭುತ ನಡೆದಿದೆ ಎಂದು ಡಾಕ್ಟರ್ ಹೇಳುವುದು ನಡೆದಿದೆ. ರಾಜೌರಿ ಗ್ರಾಮ ಪ್ರಜೆಗಳು ಸಹ ತಮ್ಮ ಕೈಗಳಿಂದ ಮಣ್ಣು ಮಾಡಿದ ಅಬ್ದುಲ್ ಅಜೀಜ್ ಮೂರು ದಿನಗಳ ನಂತರ ಬದುಕಿ ಬರುವುದೇನೆಂದು ಆಶ್ಚರ್ಯವನ್ನು ವ್ಯಕ್ತ ಪಡಿಸಿದ್ದಾರೆ. ಈ ಸಂಘಟನೆ ನಡೆದು ಇಲ್ಲಿಗೆ ಕೇವಲ ಆರು ವರ್ಷ ಏಳು ತಿಂಗಳು ಮಾತ್ರವೆ ಆಗುತ್ತಿದೆ. ಈ ವಿಷಯವನ್ನು ಎಲ್ಲರಿಗೂ ತಿಳಿಯುವಂತೆ ಆ ದಿನವೆ ಟೀವಿ ಛಾನಲ್‌ಗಳು ಎಲ್ಲಾ ಪ್ರಸಾರ ಮಾಡಿವೆ. ಈ ಸಂಘಟನೆಯೂ ಸಹ ಡಾಕ್ಟರ್‌ಗಳ ಸಮಕ್ಷಮದಲ್ಲಿಯೆ ನಡೆದಿದೆ. ಆದ್ದರಿಂದ ಯಾರು ಇದನ್ನು ಖಂಡಿಸುವುದಕ್ಕಾಗಲಿ, ಮೂಢನಂಬಿಕೆ ಎನ್ನುವುದಕ್ಕಾಗಲಿ ಸಾಧ್ಯವಿಲ್ಲ.

## (ವಿಶಾಖ ಜಿಲ್ಲೆಯಲ್ಲಿ ನಡೆದ ಒಂದು ಸಂಘಟನೆ)

ವಿಶಾಖ ಜಿಲ್ಲೆಯಲ್ಲಿ ಅರಕುಲೋಯ ಪ್ರಾಂತಕ್ಕೆ ಹೋಗುವ ದಾರಿಯಲ್ಲಿ ಶೃಂಗವರಪುಕೋಟ ಎನ್ನುವ ಊರು ಇದೆ. ಶೃಂಗವರಪುಕೋಟ ಮಂಡಲದಲ್ಲಿ ಅಲ್ಲಿಗೆ 12 ಕಿಲೋಮೀಟರ್‌ಗಳ ದೂರದಲ್ಲಿ ಸಾರೆಪುರ ಎನ್ನುವ ಗ್ರಾಮವು ಇದೆ. ಸಾರೆಪುರ ಗ್ರಾಮದಲ್ಲಿ 67 ವರ್ಷ ವಯಸ್ಸಿರುವ ಸಮುದ್ರಮ್ಮ ಎನ್ನುವ ಹೆಸರಿರುವ ಹೆಂಗಸು ಇದ್ದಳು. ಆಕೆಗೆ ಸುಮಾರು ಹತ್ತು ವರ್ಷಗಳಿಂದ ಹೈಬಿಪಿ ಮತ್ತು ಸುಗರ್‌ವ್ಯಾಧಿ ಇತ್ತು. ಆಕೆ ಶೃಂಗವರಪು ಕೋಟೆಯಲ್ಲಿ ಸೀನಿಯರ್ ಡಾಕ್ಟರ್ ಆದ ಧರ್ಮಲಿಂಗಾಚಾರಿ ಹತ್ತಿರ ವೈದ್ಯ ಮಾಡಿಸಿಕೊಳ್ಳುತ್ತಿದ್ದಳು. ಎಂ.ಬಿ.ಬಿ.ಯಸ್ ಡಾಕ್ಟರ್ ಧರ್ಮಲಿಂಗಾಚಾರಿಯವರು ಒಳ್ಳೆಯ ಹೆಸರುವಾಸಿಯಾದ ಸುಮಾರು 60 ವರ್ಷ ವಯಸ್ಸಿರುವ ಅನುಭವಜ್ಞನು. ಇಲ್ಲಿಗೆ 6 ವರ್ಷಗಳ ಕೆಳಗೆ ಒಂದುದಿನ ಸಾಯಂಕಾಲ 6 ಗಂಟೆಗಳ ಸಮಯದಲ್ಲಿ ಸಮುದ್ರಮ್ಮನನ್ನು ಡಾಕ್ಟರ್ ಧರ್ಮಲಿಂಗಾಚಾರಿ ಹತ್ತಿರಕ್ಕೆ ತೆಗೆದುಕೊಂಡು ಬರುವುದು ನಡೆದಿದೆ. ಅದಕ್ಕಿಂತ ಮೊದಲು ಪ್ರಭುತ್ವ ಆಸ್ಪತ್ರೆಯಲ್ಲಿ ಮರಣಿಸಿದ್ದಾಳೆಂದು ಹೇಳಿದ ನಂತರ ಅಲ್ಲಿಗೆ ತೆಗೆದುಕೊಂಡು ಬಂದಿದ್ದಾರೆ. ಆಗ ಡಾಕ್ಟರ್‌ರವರು ಆಕೆಯನ್ನು ನೋಡಿದಾಗ ಆಕೆಯ ಶರೀರದಲ್ಲಿ ಬಿ.ಪಿ ಆಗಲಿ, ನಾಡಿಯಾಗಲಿ ಸ್ವಲ್ಪವೂ ಸಹ ಇರಲಿಲ್ಲ. ಆಕೆಗೆ ಶ್ವಾಸವಾಗಲಿ, ನಾಡಿ (ಪಲ್ಸ್) ಆಗಲಿ ಇಲ್ಲದಿರುವಾಗ ಆಕೆಯನ್ನು ಮರಣಿಸಿದಂತೆ ನಿರ್ಧಾರಿಸಿದ ಡಾಕ್ಟರ್ "ಮನೆಗೆ ತೆಗೆದುಕೊಂಡು ಹೋಗಿ, ಈಕೆ ಸತ್ತುಹೋಗಿದ್ದಾಳೆ, ಈಕೆಗೆ ವೈದ್ಯದ ಅವಶ್ಯ ಇಲ್ಲ ಎಂದಿದ್ದಾರೆ." ಆಗ ಅವರು 12 ಕಿಲೋಮೀಟರ್‌ಗಳ ದೂರದಲ್ಲಿರುವ ಅವರ ಗ್ರಾಮಕ್ಕೆ ತೆಗೆದುಕೊಂಡು ಹೋದರು. ಆಗ ರಾತ್ರಿ ಆಗಿರುವುದರಿಂದ ಬೆಳಗ್ಗೆ ಆಕೆಯನ್ನು ಮಣ್ಣು ಮಾಡಬೇಕೆಂದುಕೊಂಡರು. ಬೆಳಗಾಗುತ್ತಲೇ ಮಳೆ ಪ್ರಾರಂಭವಾಗಿ ಎರಡು ದಿನಗಳು ಬಿಡದಂತೆ ಬೀಳುವುದರಿಂದ ಹೊರಗೆ ಹೋಗುವುದಕ್ಕೆ ಅವಕಾಶ ಇಲ್ಲದಂತೆಹೋಗಿದೆ. ಸಮುದ್ರಮ್ಮನ ಶವವನ್ನು ಹಾಗೆಯೇ ಮೂರುದಿನಗಳು ಮನೆಯ ಆವರಣದಲ್ಲಿಯೇ ಇಟ್ಟಿದ್ದಾರೆ. ಮೂರುದಿನಗಳ ನಂತರ ನಾಲ್ಕನೆಯದಿನ ಬೆಳಗ್ಗೆ

ಆಕೆ ಎದ್ದು ಕುಳಿತುಕೊಂಡು ಎಲ್ಲರನ್ನು ಕರೆದಳಂತೆ. ಆಗ ಆಕೆಯ ಸಂಬಂಧಿಕರು ಆಕೆ ಬದುಕಿದಂತೆ ಗ್ರಹಿಸಿ ತಕ್ಷಣ ಡಾಕ್ಟರ್ ಧರ್ಮಲಿಂಗಾಚಾರಿಯವರಿಗೆ ಫೋನ್ ಮಾಡುವುದು ನಡೆದಿದೆ. ಹದಿನೈದು ದಿನಗಳು ಕಳೆದ ನಂತರ ಆಕೆಯನ್ನು ಡಾಕ್ಟರ್‌ರವರ ಹತ್ತಿರಕ್ಕೆ ಕರೆದುಕೊಂಡು ಬರುವುದು ನಡೆದಿದೆ. ಆಗ ಡಾಕ್ಟರ್ "ನೀನು ಮರಣಿಸಿ ಮೂರು ದಿನಗಳು ಹಾಗೇ ಇದ್ದೀಯಾ ಅಲ್ಲವೆ! ಆಗ ನಿನಗೆ ಯಮಭಟರಾಗಲಿ, ಯಮಲೋಕವಾಗಲಿ ಏನಾದರು ಕಾಣಿಸಿವೆಯಾ?" ಎಂದು ಕೇಳಿದ್ದಾನೆ. ಅದಕ್ಕೆ ಆಕೆ "ನನಗೆ ಏನು ಕಾಣಿಸಲಿಲ್ಲ" ಎಂದು ಹೇಳಿದಳಂತೆ. ಈ ಸಂಘಟನೆಯೂ ಸಹ ಒಬ್ಬ ಡಾಕ್ಟರ್ ಸಮಕ್ಷಮದಲ್ಲಿಯೇ ಆರು ವರ್ಷಗಳ ಕೆಳಗೆ ನಡೆದಿದೆ. ಆದ್ದರಿಂದ ಇದನ್ನು ಸಹ ಯಾರೂ ಅಲ್ಲವೆನ್ನುವುದಕ್ಕಾಗಲಿ, ಮೂಢನಂಬಿಕೆ ಎನ್ನುವುದಕ್ಕಾಗಲಿ ಸಾಧ್ಯವಿಲ್ಲ.

ಶುಕ್ರವಾರ ಮಧ್ಯಾಹ್ನ ಮೂರುಗಂಟೆಗಳ ನಂತರ ಶಿಲುಬೆ ಹಾಕಲ್ಪಟ್ಟ ಯೇಸುನನ್ನು ಮರಣಿಸಿದ್ದಾನೆಂದು ನಿರ್ಧಾರಿಸಿದ ನಂತರ ಯೇಸು ಅನುಚರರು ಸಂಜೆ ಯೇಸು ಶರೀರವನ್ನು ತೆಗೆದುಕೊಂಡು ಹೋಗಿ ಭೂಗರ್ಭ ಸಮಾಧಿಯಲ್ಲಿ ಇಟ್ಟಿದ್ದಾರೆ. ಹಾಗೆ ತೆಗೆದುಕೊಂಡು ಹೋದ ಆತನ ಶಿಷ್ಯರು ಯೇಸು ಶರೀರವನ್ನು ಶವವಾಗಿಯೇ ಭಾವಿಸಿದ್ದಾರೆ. ಅಂದಿಗೆ ಅದು ಶವವಾಗಿಯೇ ಇರುತ್ತದೆ. ಆದರೂ ಪ್ರಾಣ ಒಳಗೇ ಇರುತ್ತದೆ. ಮೇಲೆ ಹೇಳಿದ ಉದಾಹರಣೆಗಳನ್ನು ನೋಡಿದರೇ ತಾತ್ಕಾಲಿಕ ಮರಣ ಸ್ವಲ್ಪ ಅರ್ಥವಾಗುತ್ತದೆ. ಯೇಸು ಶರೀರದಲ್ಲಿ ಗುರುವಾರ ರಾತ್ರಿಯಿಂದ ನಿದ್ರೆಯಲ್ಲಿರುವವನು ಶುಕ್ರವಾರ ಸಂಜೆ ಸಮಾಧಿಯಲ್ಲಿರಿಸಿದಾಗ ತಾತ್ಕಾಲಿಕ ಮರಣದಲ್ಲಿ ಸಮಾಧಿಯಲ್ಲಿ 33 ಗಂಟೆಗಳ ಕಾಲ ಇದ್ದ ನಂತರ ಆತನು ತಾತ್ಕಾಲಿಕ ಮರಣದಿಂದ ಜ್ಞಾಪಕ ಬಂದು ಅಂದರೆ ಎಚ್ಚರದೊಳಗೆ ಆತ್ಮ ತೆಗೆದುಕೊಂಡು ಬಂದಾಗ ಯೇಸು ಜ್ಞಪ್ತಿಯೊಳಗೆ ಬಂದು ಎದ್ದು ಬರುವುದು ನಡೆದಿದೆ. ಅಂದಿಗೆ ಅದು ಕ್ರೈಸ್ತರೆಲ್ಲರಿಗೂ ವಿಚಿತ್ರವಾಗಿ ಕಾಣಿಸಿದರೂ ದೇವರು ನಿರ್ಣಯಿಸಿದ ಮೂರು ವಿಧಗಳ ಮರಣಗಳಲ್ಲಿ ಅದು ತಾತ್ಕಾಲಿಕ ಮರಣವೆಂದು ಯಾರಿಗೂ ತಿಳಿದಿಲ್ಲ. ಅಂದಿನ ಕ್ರೈಸ್ತರು ಪ್ರತ್ಯಕ್ಷವಾಗಿ ನೋಡಿದ ವಿಷಯವನ್ನೇ ಹೇಳಿದ್ದಾರೆ, ಆದ್ದರಿಂದ ಯೇಸುಗೆ ಶಿಲುಬೆ ಮೇಲೆ

ಶಿಕ್ಷೆಯನ್ನು ಹಾಕಿದ್ದಾರೆ. "ಆತನು ಶಿಲುಬೆ ಮೇಲೆ ಮರಣಿಸಿದ್ದಾನೆ" ಎನ್ನುವುದು ಒಂದು ರೀತಿಯಲ್ಲಿ ಪ್ರತ್ಯಕ್ಷ ಸತ್ಯವೇ ಆದರೂ, "ಆತನು ಶಿಕ್ಷೆಗೆ ಗುರಿಯಾಗಲಿಲ್ಲ, ಆತನು ಶಿಲುಬೆಯನ್ನು ಏರಲಿಲ್ಲ. ಆತನು ಶಿಲುಬೆ ಮೇಲೆ ಮರಣಿಸಲಿಲ್ಲ" ಎನ್ನುವುದೇ ಪರೋಕ್ಷ ಸತ್ಯ. ಆದಿನ ನೋಡದಿದ್ದರೂ ತನ್ನ ಜ್ಞಾನದಿಂದ ಸೂಕ್ಷ್ಮವಾಗಿ ನಡೆದ ವಿಷಯವು ಸತ್ಯವೆಂದು ಜಿಬ್ರಯೇಲ್ ಹೇಳಿದ್ದಾನೆ. ಜಿಬ್ರಯೇಲ್ ಹೇಳಿರುವುದು ಪರೋಕ್ಷವಾಗಿ ನೂರಕ್ಕೆ ನೂರುಪಾಲು ಸತ್ಯವೇ. ಆದರೇ ಪ್ರತ್ಯಕ್ಷವಾಗಿ ಆದಿನ ನೋಡಿರುವುದು ಯೇಸುನನ್ನು ಶಿಲುಬೆ ಮೇಲೆಗೆ ಏರಿಸಿದ್ದಾರೆಂದು, ಆತನು ಮರಣಿಸಿದ್ದಾನೆಂದು ಹೇಳುತ್ತಿರುವುದು ಸತ್ಯವೇ. ಇಲ್ಲಿ ಎರಡು ಸತ್ಯಗಳು ಹೇಗೆ ನಡೆಯುತ್ತವೆಯೆಂದು ಪ್ರಶ್ನಿಸಿದರೆ ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ.

## ಚಿತೆಯಿಂದ ಪ್ರಾಣದೊಂದಿಗೆ..!

(ಸಾಕ್ಷಿ Newspaper 10–7–2012)

* ತಂಗಿಯ ರೋದನೆಯೊಂದಿಗೆ 'ಕಣ್ಣು ತೆರೆದ' ಅಣ್ಣ
* ವೈದ್ಯರ ನಿರ್ಲಕ್ಷ್ಯದ ಮೇಲೆ ಎಲ್ಲಾಕಡೆಗೆ ಚರ್ಚೆ!

**ಚೆನ್ನೈ, ನ್ಯೂಸ್‌ಲೈನ್ :** ಅನಾರೋಗ್ಯದಿಂದ ಬಾಧೆಪಡುತ್ತಿರುವ ತಮಿಳನಾಡು ಕರೂರ್ ಜಿಲ್ಲೆ ಕೃಷ್ಣರಾಯಪುರಕ್ಕೆ ಸೇರಿದ 50ವರ್ಷದ ಮುತ್ತುಸ್ವಾಮಿ ಮಂಗಳವಾರ ಮರಣಿಸಿದ್ದಾನೆಂದು ಡಾಕ್ಟರ್‌ಗಳು ತಿಳಿಸಿದ್ದಾರೆ. ಮೃತ ದೇಹವನ್ನು ತೆಗೆದುಕೊಂಡುಹೋಗಿ ಅಂತಿಮ ಸಂಸ್ಕಾರ ಮಾಡಬೇಕೆಂದು ಹೇಳಿದ್ದಾರೆ. ವಯಸ್ಸು ಹೆಚ್ಚಾಗುವುದೂ, ಅನಾರೋಗ್ಯ ಬಾಧಿಸುವುದರಿಂದ ಮುತ್ತುಸ್ವಾಮಿ ನಿಜವಾಗಿ ಮರಣಿಸಿರುತ್ತಾನೆಂದು ಭಾವಿಸಿದ ಬಂಧುಗಳು ಚಿತೆಗೆ ಏರ್ಪಾಟುಗಳನ್ನು ಮಾಡಿದ್ದಾರೆ. ಸ್ಮಶಾನದಲ್ಲಿ ಬಂಧುಗಳೆಲ್ಲರೂ ಸೇರಿದ್ದಾರೆ. ಇನ್ನು ಬೆಂಕಿ ಹಚ್ಚುವುದೇ ತಡ. ಚಿತಿಮೇಲೆ ಮಲಗಿಸಿರುವ ಶವವನ್ನು ಕೊನೆಯದಾಗಿ ನೋಡುವುದಕ್ಕೆ ಬಂದಿರುವ ಮುತ್ತುಸ್ವಾಮಿ ತಂಗಿ ಪಾಪಾತ್ತಿ, ದುಃಖವನ್ನು

ತಡೆಯಲಾರದೆ ಪಾರ್ಥಿವ ದೇಹದಮೇಲೆ ಬಿದ್ದು ಜೋರಾಗಿ ಅತ್ತಿದ್ದಾಳೆ. 'ಅಣ್ಣಾ ನನ್ನನ್ನು ಬಿಟ್ಟುಹೋಗುತ್ತೀಯಾ?' ಎನ್ನುತ್ತಾ ರೋಧಿಸಿದಳು. ಅಷ್ಟೇ! ಮರಣಿಸಿದ್ದಾನೆಂದುಕೊಂಡ ಮುತ್ತುಸ್ವಾಮಿಯಲ್ಲಿ ಕದಲಿಕೆ!! ಕಾಲು, ಕೈಗಳು ಅಲುಗಾಡಿದವು. ಅಷ್ಟೇ ಅಲ್ಲದೆ ಚಿಕ್ಕದಾಗಿ ಧ್ವನಿ ಮಾಡಿ ಮುಲುಗುವುದು ಸಹ ಕೇಳಿಸಿತು. ಕೆಲವು ನಿಮಿಷಗಳಲ್ಲೇ ಕಾಲೂ, ಕೈಗಳಲ್ಲಿ ಸ್ವಲ್ಪ ಕದಲಿಕೆ ಕಣ್ಣೀರಿನ ಸಮುದ್ರದಲ್ಲಿ ಮುಳುಗಿಹೋದ ಬಂಧುಗಳಿಗೆ ಈ ಪರಿಮಾಣದಿಂದ ಒಂದುಸಲ ಆಶ್ಚರ್ಯಾನಂದಗಳಿಗೆ ಒಳಗಾಗಿ ಜೋರಾಗಿ 'ಮುತ್ತುಸ್ವಾಮಿ.. ಮುತ್ತುಸ್ವಾಮಿ' ಎಂದು ಒಂದು ಕಡೆ ಕೂಗಿದ್ದಾರೆ. ಇವರ ಕೂಗುಗಳಿಗೆ ನಿದ್ರೆಯಿಂದ ಎಚ್ಚರ ಗೊಂಡಂತೆ ಚಿತಿಮೇಲೆಯಿಂದ ಎದ್ದಿದ್ದಾನೆ ಮುತ್ತುಸ್ವಾಮಿ. 'ಏನು? ಏನಾಗಿದೆ? ಎಂದು ಬಂಧುಗಳನ್ನು ಎದುರು ಪ್ರಶ್ನಿಸಿದ್ದಾನೆ. ಇದರಿಂದ ಎಲ್ಲರೂ ಸಂತೋಷ ದಿಂದ ಮುತ್ತುಸ್ವಾಮಿಯನ್ನು ಅಪ್ಪಿಕೊಂಡು, ಪುನಃ ಆಸ್ಪತ್ರೆಗೆ ಸೇರಿಸಿದ್ದಾರೆ. ಮುತ್ತುಸ್ವಾಮಿ ಏಕೈಕ ಮಗಳಿಗೆ ಸೋಮವಾರದಂದೇ ವಿವಾಹ ನಡೆದಿರುವುದು ಗಮನಾರ್ಹ.

**ವೈದ್ಯರ ನಿರ್ಲಕ್ಷ್ಯ:** ಅನಾರಾಗ್ಯದಿಂದ ಬಾಧೆಪಡುತ್ತಾ ಹತ್ತು ದಿನಗಳ ಕೆಳಗೆ ಸ್ಥಳೀಯ ಆಸ್ಪತ್ರೆಯಲ್ಲಿ ಸೇರಿದ ಮುತ್ತು ಸ್ವಾಮಿಯ ಮೇಲೆ ವೈದ್ಯರು ನಿರ್ಲಕ್ಷ್ಯವಾಗಿ ವ್ಯವಹರಿಸಿದ್ದಾರೆಂದು ಬಂಧುಗಳು ವಿಮರ್ಶಿಸಿದ್ದಾರೆ. ವೈದ್ಯರು ಮಾಡಿದ ತೀರ್ಮಾನದ ಮೇಲೆ ಆಕ್ರೋಶ ವ್ಯಕ್ತಪಡಿಸಿದ್ದಾರೆ. ಆದಾಗ, ಈ ವಾರ್ತೆ ಕರೂರು ಜಿಲ್ಲೆಯಲ್ಲಿ ಪೂರ್ತಿ ಹರಡಿತು. ಇದರಿಂದ ಎಲ್ಲಾಕಡೆ ಇದರಮೇಲೆಯೇ ಚರ್ಚೆ ಮುಂದುವರೆಯಿತು.

ಆ ದಿನ ಪ್ರತ್ಯಕ್ಷವಾಗಿ ನೋಡಿದವರು ಮೇಲ್ನೋಟಕ್ಕೆ ಕಾಣಿಸುವ ಯೇಸು ಶರೀರವನ್ನು ನೋಡಿದ್ದಾರೆ ಹೊರತು, ಶರೀರದಲ್ಲಿ ಯೇಸು ಇದ್ದಾನಾ? ಇಲ್ಲವಾ? ಎಂದು ನೋಡಲಿಲ್ಲ. ಯೇಸು ಎಷ್ಟು ಸಮಯ ನಿದ್ರೆಯಲ್ಲಿರುವುದು, ಆತನು ಯಾವಾಗ ತಾತ್ಕಾಲಿಕ ಮರಣದೊಳಗೆ ಹೋಗಿರುವುದು ಮೇಲ್ನೋಟಕ್ಕೆ ಕಾಣಿಸುವ ವಿಷಯವಲ್ಲ, ಆದ್ದರಿಂದ ಅವರು ಯೇಸುನನ್ನು ಶಿಲುಬೆ ಮೇಲೆ

ಏರಿಸುವವರೆಗು ಇದ್ದು ನಂತರ ಶಿಕ್ಷೆ ಜಾರಿಗೆ ಆದನಂತರ ಮರಣಿಸಿದ್ದಾನೆಂದು ನಂಬುತ್ತಿದ್ದಾರೆ. ಕ್ರೈಸ್ತರು ನೋಡಿರುವುದು ಪ್ರತ್ಯಕ್ಷ ಯಥಾರ್ಥ. ಜಿಬ್ರಯೇಲ್ ಹೇಳಿರುವುದು ಪರೋಕ್ಷ ಯಥಾರ್ಥ. ಇಬ್ಬರದು ಸತ್ಯವೇ ಆದರೂ ಯಾರದು ಪ್ರತ್ಯಕ್ಷ ಸತ್ಯ, ಯಾರದು ಪರೋಕ್ಷ ಸತ್ಯ ಎಂದು ತಿಳಿಯಲ್ಪಡದೆ ಇರುವುದರಿಂದ ಕ್ರೈಸ್ತರು ಹೇಳಿರುವುದನ್ನು ಮುಸ್ಲಿಮ್‌ರು ಅಸತ್ಯವೆನ್ನುತ್ತಿದ್ದಾರೆ. ಅದೇ ರೀತಿಯಾಗಿ ಮುಸ್ಲಿಮರು ಹೇಳಿರುವುದನ್ನು ಕ್ರೈಸ್ತರು ಅಸತ್ಯವೆನ್ನುತ್ತಿದ್ದಾರೆ. ಇಲ್ಲಿ ನಾವು ಏನು ಹೇಳುತ್ತಿದ್ದೇವೆಂದರೇ ಪ್ರತ್ಯಕ್ಷವಾಗಿ ಕಾಣಿಸಿರುವುದು ಶರೀರವೇ ಅಲ್ಲವೇ! ಅದರಲ್ಲಿ ಯಾರಿರುವುದು ತಿಳಿದಿಲ್ಲ, ಆದ್ದರಿಂದ ಜಿಬ್ರಯೇಲ್ ಜ್ಞಾನದೃಷ್ಟಿಯಿಂದ ನೋಡಿರುವುದೇ ಸತ್ಯವೆನ್ನುತ್ತೇವೆ. ಕ್ರೈಸ್ತರು ಪ್ರಪಂಚ ದೃಷ್ಟಿಯಿಂದ ನೋಡಿದ್ದಾರೆ ಆದ್ದರಿಂದ ಅವರಿಗೆ ಕಾಣಿಸುವುದು ಪ್ರತ್ಯಕ್ಷ ಸತ್ಯವೇ ಆದರೂ ಅದು ಸ್ಥೂಲ ದೃಷ್ಟಿಯೇ ಹೊರತು, ಸೂಕ್ಷ್ಮ ದೃಷ್ಟಿ ಅಲ್ಲ. ಆದುದರಿಂದ ಅಂತಿಮ ದೈವಗ್ರಂಥದಲ್ಲಿ ಪರೋಕ್ಷವಾಗಿ ಹೇಳಿರುವುದೇ ನಿಜವಾದ ಸತ್ಯವೆಂದು, ಕ್ರೈಸ್ತರು ಆ ದಿನ ಪ್ರತ್ಯಕ್ಷವಾಗಿ ನೋಡಿರುವುದು ಸತ್ಯವೇ ಆದರೂ ಅದು ನಿಜವಾದ ಅಸತ್ಯವೆಂದು ತಿಳಿಯಬೇಕು. ಈಗ ನಾವು ಹೇಳಿರುವುದು ಗ್ರಹಿಸಿಕೊಳ್ಳುವವರಿಗೇ ಅರ್ಥ ವಾಗುತ್ತದೆ.

ಯೇಸು ಮರಣಿಸಿದ ನಂತರ ಭಾನುವಾರ ಬೆಳಿಗ್ಗೆ ಸಜೀವನಾಗಿ ಹೊರಗೆ ಬಂದಿದ್ದಾನೆ ಎಂದು ಕ್ರೈಸ್ತರು ಹೇಳುತ್ತಿರುವಾಗ, ಆತನು ಮರಣಿಸಲಿಲ್ಲ ಎಂದು ಮುಸ್ಲಿಮ್‌ರು ಹೇಳಿತ್ತಿದ್ದರೂ ಇವರು ಅವರು 4–158 ವಾಕ್ಯದಲ್ಲಿ ತಪ್ಪಾಗಿತಿಳಿದು ಮಾತನಾಡುತ್ತಿದ್ದಾರೆ. ಆ ವಾಕ್ಯದಲ್ಲಿ ದೇವರು ಯೇಸುನನ್ನು ತನ್ನಕಡೆ ಮೇಲಕ್ಕೆ ಎತ್ತಿಕೊಂಡಿದ್ದಾನೆ ಎಂದು ಹೇಳುತ್ತಿದ್ದಾರೆ. ವಾಕ್ಯದಲ್ಲಿ ಆ ಮಾತಿದ್ದರೂ, ಅದು ನಿಜವೇ ಆದರೂ ಕಾಣಿಸುವ ವಾಕ್ಯ ಬೇರೆ, ಅರ್ಥ ಮಾಡಿಕೊಳ್ಳುವ ಭಾವನೆ ಬೇರೆಯೆಂದು ತಿಳಿಯಬೇಕು. "ಯೇಸುನನ್ನು ದೇವರು ಹಾಗೆಯೇ ಮೇಲಕ್ಕೆ ತೆಗೆದುಕೊಂಡು ಹೋಗಿದ್ದಾನೆ, ಯೇಸುನನ್ನು ಹೋಲಿರುವ ವ್ಯಕ್ತಿಯನ್ನು ಹಿಡಿದುಕೊಂಡು ಬಂದು ಶಿಲುಬೆ ಮೇಲಕ್ಕೆ ಏರಿಸಿ ಸಾಯಿಸಿದ್ದಾರೆ."

ಎಂದು ಹೇಳುತ್ತಿದ್ದಾರೆ. "ಯೇಸುನನ್ನೇ ಸಾಯಿಸಿದ್ದಾರೆ" ಎಂದು ಕ್ರೈಸ್ತರು ಅಂದಾಗ! ಯೇಸುವಿನಂತೆ ಹೋಲಿಕೆಗಳಿರುವ ಮನುಷ್ಯನನ್ನು ಶಿಲುಬೆಗೆ ಏರಿಸಿದ್ದಾರೆಂದು, ಆತನನ್ನೇ ಸಾಯಿಸಿದ್ದಾರೆಂದು ಅದರಿಂದ ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆಂದು ಕ್ರೈಸ್ತರು ತಪ್ಪಾಗಿ ಅರ್ಥೈಸಿಕೊಂಡಿದ್ದಾರೆಂದು, ವಾಸ್ತವವಾಗಿ ಯೇಸು ಅವರಿಗೆ ಸಿಗಲಿಲ್ಲವೆಂದು, ದೇವರು ಆತನನ್ನು ತನ್ನಕಡೆಗೆ ಎತ್ತುಕೊಂಡಿದ್ದಾನೆಂದು ಮುಸ್ಲಿಮ್‌ರು ಹೇಳುತ್ತಿದ್ದಾರೆ. ಹಾಗೆ ಅಂದುಕೊಂಡರೆ ಮುಸ್ಲಿಮ್‌ರು ಕೂಡಾ ಪೂರ್ತಿಯಾಗಿ ತಪ್ಪಾಗಿ ತಿಳಿದಂತೆ ಆಗುತ್ತದೆ. ಇವರಿಗಿಂತ ಕ್ರೈಸ್ತರೇ ಸ್ವಲ್ಪ ಮೇಲೆನಿಸುತ್ತದೆ. ವಾಸ್ತವಕ್ಕೆ ಇವರಿಗಾಗಲಿ ಅವರಿಗಾಗಲಿ ಯೇಸು ಮರಣವನ್ನು ಕುರಿತು ಸತ್ಯ ತಿಳಿದಿಲ್ಲವೆಂದೇ ಅರ್ಥವಾಗುತ್ತಿದೆ. ಜಿಬ್ರಯೇಲ್ ಹೇಳಿರುವುದು ಕಾಣಿಸದ ಸತ್ಯ. ಕ್ರೈಸ್ತರು ನೋಡಿರುವುದು ಕಾಣಿಸುವ ಅಸತ್ಯ. ಕ್ರೈಸ್ತರು ನೋಡಿರುವುದು ಭೌತಿಕವಾಗಿ ಸತ್ಯವೇ ಆದರೂ, ಅಭೌತಿಕವಾಗಿ ಅಸತ್ಯ. ಹಾಗೆ ಜಿಬ್ರಯೇಲ್ ಹೇಳಿರುವುದು ಅಭೌತಿಕವಾಗಿ ಸತ್ಯ. ಆದರೆ ಈ ಎರಡೂ ಮುಸ್ಲಿಮ್‌ರಿಗೆ ಅರ್ಥವಾಗಿಲ್ಲ. ಮೊದಲಿಗೇ ಮೋಸ ಎನ್ನುವಂತೆ ಕಾಣಿಸುವ ಯೇಸು ಶರೀರವನ್ನು ಶಿಲುಬೆಮೇಲಕ್ಕೆ ಏರಿಸಿದರೂ, ಅದು ಯೇಸುನನ್ನು ಹೋಲಿದ ಮನುಷ್ಯ ಎನ್ನುವುದು ಪೂರ್ತಿ ತಪ್ಪು. ಇದರಿಂದ ಜಿಬ್ರಯೇಲ್ ಸತ್ಯವನ್ನು ಹೇಳಿದರೂ, ಮುಸ್ಲಿಮ್‌ರಾಗಲಿ, ಕ್ರೈಸ್ತರಾಗಲಿ, ಅರ್ಥ ಮಾಡಿಕೊಂಡಿಲ್ಲವೆಂದು ಹೇಳಬಹುದು.

ಯೇಸು ಸಮಾಧಿಯಿಂದ 33 ಗಂಟೆಗಳ ನಂತರ ಎದ್ದುಬಂದಿದ್ದಾನೆಂದು ಹೇಳಿಕೊಂಡಿದ್ದೇವೆ. ಕ್ರೈಸ್ತರು ಸಹ ಅದೇ ಹೇಳುತ್ತಿದ್ದಾರೆ. ಅಲ್ಲಿಯವರೆಗೂ ಇಲ್ಲದ ಯೇಸು ಭಾನುವಾರ ಬೆಳಿಗ್ಗೆ ಏಳುವುದು ನಡೆದಿದೆ. ಗುರುವಾರ ರಾತ್ರಿ ಎರಡು ಗಂಟೆಗಳಿಗೆ ನಿದ್ರೆಯೊಳಗೆ ಹೋದ ಯೇಸು ಮೂರು ಗಂಟೆಗಳ ಸಮಯದಲ್ಲಿ ಎದ್ದಿದ್ದಾನೆ. ಗುರುವಾರ ರಾತ್ರಿ ನಿದ್ರೆಯೊಳಗೆ ಹೋದ ಯೇಸು ಶರೀರದಲ್ಲಿ ಎಲ್ಲಿದ್ದು ಪುನಃ ಎದ್ದಿದ್ದಾನೆ? ಅಲ್ಲಿಯವರೆಗೂ ನಡೆದಿರುವುದು ತಿಳಿದಿಲ್ಲವೆ? ಎನ್ನುವ ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಿಕೊಳ್ಳಬಹುದು. ಗುರುವಾರ ರಾತ್ರಿ ನಿದ್ರೆಯೊಳಗೆ ಹೋದ ಯೇಸು ಬ್ರಹ್ಮನಾಡಿಯಲ್ಲಿ ತನ್ನ ಮನಸ್ಸು

ನಿಂತುಹೋದರೆ ತಾನು ಮಾತ್ರ ಗುಣಚಕ್ರದಲ್ಲಿಯೇ ಏನೂ ತಿಳಿಯದ ಸ್ಥಿತಿಯಲ್ಲಿ ಇದ್ದಾನೆ. ಹೊರಗೆ ಸೈನಿಕರು ತರುವುದು, ನ್ಯಾಯಸ್ಥಾನದಲ್ಲಿ ತೀರ್ಪು ನಡೆಯುವುದು, ನಂತರ ಶಿಲುಬೆ ಹಾಕುವವರೆಗು ಆತನು ನಿದ್ರೆಯಲ್ಲಿಯೇ ಇದ್ದಾನೆ. ಅಲ್ಲಿಗೆ ಸುಮಾರು ರಾತ್ರಿ ಎರಡು ಗಂಟೆಗಳಿಂದ ಹಗಲು ಮೂರು ಗಂಟೆಗಳವರೆಗು ಅಂದರೇ 12 ಅಥವಾ 13 ಗಂಟೆಗಳು ನಿದ್ರೆಯಲ್ಲಿಯೇ ಇದ್ದಾನೆ. ಶಿಲುಬೆಗೆ ಹಾಕುವವರೆಗಿರುವ ಆತ್ಮ ಒಳಗೆ ಅಡಗಿಕೊಂಡು ಮರಣಿಸಿದಂತೆ ನಟಿಸಿ ಹೊರಗೆ ಕಾಣಿಸುವಂತೆ ಮಾಡಿದೆ. ಆಗ ಆತ್ಮ ಗುಣಚಕ್ರ ಮಧ್ಯ ಭಾಗದಲ್ಲಿರುವ ಬ್ರಹ್ಮನಾಡಿಯೊಳಗೆ ಸೇರಿಹೋಗಿದೆ. ಆಗ ಸಪ್ತ ನಾಡೀಕೇಂದ್ರಗಳಲ್ಲಿ ಆರು ನಾಡೀಕೇಂದ್ರಗಳು ನಿಂತುಹೋಗಿ ಏಳನೆ ಕೇಂದ್ರ ಹಾಗೆಯೇ ಇರುತ್ತದೆ. ಅದನ್ನೇ 'ಮರಣ' ಎನ್ನುತ್ತೇವೆ. ಹಾಗೆ ಆರು ಕೇಂದ್ರಗಳು ನಿಂತುಹೋದಾಗ ಶರೀರದಲ್ಲಿ ನಡೆಯುವ ಯಾವ ಕಾರ್ಯವೂ ನಡೆಯುವುದಿಲ್ಲ. ಆಗ 'ಮರಣ' ಎನ್ನುತ್ತೇವೆ. ಮರಣದಲ್ಲಿ ಆತ್ಮ ಒಳಗಿದ್ದರೆ ಅದು ತಾತ್ಕಾಲಿಕ ಮರಣವಾಗುತ್ತದೆ. ತಾತ್ಕಾಲಿಕ ಮರಣದಲ್ಲಿ ಜೀವಿಯು ಗುಣಗಳ ಮಧ್ಯ ಇರಬಾರದು. ಆದ್ದರಿಂದ ಬ್ರಹ್ಮನಾಡಿಯಲ್ಲಿರುವ ಆತ್ಮವೇ ದೇವರಂತೆ ಜೀವಿಯನ್ನು ತನ್ನಕಡೆ ಸೆಳೆದುಕೊಂಡು ಬ್ರಹ್ಮನಾಡಿಯಲ್ಲಿ ಸೇರಿಕೊಳ್ಳುತ್ತಿದೆ. ಶರೀರದಲ್ಲಿ ಯೇಸು ಆಗಿ ಇರುವ ಜೀವಿಯನ್ನು ದೇವರ ಆತ್ಮವಾದ ಆತ್ಮವೇ ತನ್ನಕಡೆ ಸೆಳೆದುಕೊಂಡು ಬ್ರಹ್ಮನಾಡಿಯಲ್ಲಿ ಸೇರಿಸಿಕೊಳ್ಳುತ್ತಿದೆ. ಆಗಅದು ಅಲ್ಲಿಂದ ಮರಣವಾಗಿ ಪರಿಗಣಿಸಲ್ಪಡುತ್ತದೆ. ಅಲ್ಲಿಯವರೆಗೂ ನಿದ್ರೆಯಾಗಿರುವುದು ಆಗ ಮರಣವಾಗಿ ಲೆಕ್ಕಿಸಲ್ಪಡುತ್ತದೆ. ಯೇಸು ಆಗ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು ಹೇಳಬಹುದು. ಶರೀರದೊಳಗೆ ನಡೆದಿರುವುದು ಜಿಬ್ರಯೇಲ್ ಹೇಳಿದಾಗ ಅದನ್ನು ಅರ್ಥ ಮಾಡಿಕೊಳ್ಳದವರು ದೇವರೇ ಯೇಸುನನ್ನು ಮೇಲೆ ಆಕಾಶಕ್ಕೆ ತನ್ನಕಡೆ ಸೆಳೆದುಕೊಂಡಿದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ದೇವರು ಶರೀರದಲ್ಲಿಯೇ ಇದ್ದಾನೆ. ಶರೀರದಲ್ಲಿಯೇ ಆತ್ಮ, ಜೀವಾತ್ಮನನ್ನು ದೇವರಕಡೆ ಸೆಳೆದು ಮರಣದೊಳಗೆ ಸೇರಿಸುತ್ತಿದೆ. ಅದು ತಾತ್ಕಾಲಿಕ ಮರಣದಲ್ಲಿಯೇ ಹಾಗೆ ನಡೆಯುತ್ತಿದೆ.

ಯೇಸುಗೆ ನಡೆದಿರುವುದು ಅಷ್ಟೇ! ಅದೇ ವಿಷಯವನ್ನೇ ಜಿಬ್ರಯೇಲ್ ಹೇಳಿದ್ದಾನೆ. ಜಿಬ್ರಯೇಲ್ ಹೇಳಿರುವುದು ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲ. ಕ್ರೈಸ್ತರಿಗು ಅರ್ಥವಾಗಲಿಲ್ಲ. ನಡೆದಿರುವ ಸತ್ಯವನ್ನು ಹೊರಗೆ ಹೇಳುವವರು ಇಲ್ಲದಿರುವುದರಿಂದ ಇಲ್ಲಿಯವರೆಗೂ ಆ ವಿವರ ಹೊರಗೆ ಬರಲಿಲ್ಲ. ಯೇಸು ತಾತ್ಕಾಲಿಕ ಮರಣದಲ್ಲಿ 33 ಗಂಟೆಗಳಿದ್ದು ಪುನಃ ಎಚ್ಚರದೊಳಗೆ ಬರುವುದು ನಡೆದಿದೆ. ಅದಕ್ಕುಮುನ್ನ ಹನ್ನೆರಡು (12) ಗಂಟೆಗಳ ಕಾಲ ನಿದ್ರೆಯಲ್ಲಿ ಕಳೆದ ಯೇಸು ನಿದ್ರೆಯಿಂದ ನೇರವಾಗಿ ತಾತ್ಕಾಲಿಕ ಮರಣದೊಳಗೆ ಹೋಗಿದ್ದಾನೆ. ಅಲ್ಲಿಂದ ಹೊರಗೆ ಬರುವವರೆಗು ಹೊರಗೆ ಏನು ನಡೆದಿರುವುದು ಯೇಸುಗೆ ತಿಳಿದಿಲ್ಲ. ಆದ್ದರಿಂದ ಹೊರಗೆ ನಡೆದ ಒಂದು ಅನುಭವವನ್ನು ಸಹ ಯೇಸು ಅನುಭವಿಸಲಿಲ್ಲ. ಯೇಸು ಗುರುವಾರ ರಾತ್ರಿ ಒಳಗೆ ಹೋಗಿ ಭಾನುವಾರ ರಾತ್ರಿ ಹೊರಗೆ ಬಂದಿದ್ದಾನೆ. ಅದರಿಂದ ಮೂರು ದಿನಗಳು ಇಲ್ಲದಂತೆ ಹೋಗಿ ಬಂದಂತಾಗಿದೆ ಆದರೆ, ಆತನು ಮರಣಿಸಿದ ನಂತರ 33 ಗಂಟೆಗಳು ಮಾತ್ರವೇ ಸಮಾಧಿಯಲ್ಲಿದ್ದಾನೆ. ಸಮಾಧಿಯಿಂದ ಹೊರಗೆ ಬಂದ ನಂತರ 33 ಸಲ ತನ್ನ ಶಿಷ್ಯರಿಗೆ ಕಾಣಿಸಿದ್ದಾನೆ. ಆ ನಂತರ ಯಾರಿಗೂ ಕಾಣಿಸಲಿಲ್ಲ. ಇದೆಲ್ಲಾ ನೋಡಿದರೆ ಖುರ್‌ಆನ್ ಜಿಬ್ರಯೇಲ್ ಹೇಳಿರುವುದು ಅಸತ್ಯವಲ್ಲ. ಬೈಬಲ್‌ನಲ್ಲಿ ಕ್ರೈಸ್ತರು ಹೇಳಿರುವುದು ಅಸತ್ಯವಲ್ಲ. ಆದರೇ ದೇವರು ವಾಕ್ಯದಲ್ಲಿ ಹೇಳಿದರೂ ಗ್ರಹಿಸಲಾರದ ಸ್ಥಿತಿಯಲ್ಲಿ ಮನುಷ್ಯರು ಇದ್ದಾರೆ. ಆದ್ದರಿಂದ ಸಂಪೂರ್ಣ ಭಾವನೆಯಿಂದ ಅಂತಿಮ ದೈವಗ್ರಂಥ ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲ. ಅದೇ ವಿಧವಾಗಿ ಕ್ರೈಸ್ತರಿಗೆ ಮಧ್ಯ ದೈವಗ್ರಂಥ ಅರ್ಥವಾಗಲಿಲ್ಲ. ಇನ್ನು ಪ್ರಥಮ ದೈವಗ್ರಂಥ ಹಿಂದೂಗಳಿಗು ಅರ್ಥವಾಗಲಿಲ್ಲವೆಂದು ಹೇಳಬಹುದು. ಈಗಲಾದರೂ ಅರ್ಥಮಾಡಿಕೊಳ್ಳುತ್ತೀರೆಂದು ಆಶಿಸುತ್ತಿದ್ದೇವೆ.

**ಪ್ರಶ್ನೆ :– ನೀವು ಇಲ್ಲಿಯವರೆಗು ಹೇಳಿದ ವಿಷಯಗಳೆಲ್ಲವೂ ಹೊಸದಾಗಿ ತಿಳಿಯುವ ರಹಸ್ಯಗಳಾಗಿ ಇವೆ. ಈ ವಿಷಯಗಳೆಲ್ಲವನ್ನು ಕೇಳಿದ ನಂತರ ಮನುಷ್ಯರು ಯಾವ ವಿಧವಾಗಿ ಯೇಸು ಮರಣ ವಿಷಯದಲ್ಲಿ ತಪ್ಪಾಗಿ ತಿಳಿದಿದ್ದಾರೋ ತಿಳಿಯುತ್ತಿದೆ.**

**ಮನುಷ್ಯರಿಗೆ ಮರಣಗಳ ವಿವರ ತಿಳಿಯದಿರುವುದರಿಂದ ಯಾರಿಷ್ಟಬಂದಂತೆ ಅವರು ಅಂದುಕೊಳ್ಳುವುದು ನಡೆದಿದೆ. ಮರಣ ರಹಸ್ಯಗಳು ತಿಳಿದ ನಂತರ ಯೇಸು ಮರಣದಲ್ಲಿರುವ ಕಗ್ಗಂಟು ಬಿಚ್ಚಿಕೊಂಡಿದೆ. ಇತ್ತ ಬೈಬಲ್‌ನಲ್ಲಿ ಹೇಳಿದ ವಾಕ್ಯಗಳು, ಅತ್ತ ಖುರ್‌ಆನ್‌ನಲ್ಲಿ ಹೇಳಿದ ವಾಕ್ಯಗಳು ಎರಡೂ ಸತ್ಯವೇಯೆಂದು ನಿರೂಪಿಸಲ್ಪಟ್ಟಿವೆ. ನಮಗೆ ಇಲ್ಲಿಯವರೆಗೂ ಯೇಸು ಮರಣದಲ್ಲಿರುವ ಸಮಸ್ಯೆ ಗಳೆಲ್ಲವೂ ಬಗೆಹರಿದಿವೆ. ಆದರೇ ನೀವು ಯೇಸು ಯಾರಿಂದಲೂ ಮರಣಿಸಲಿಲ್ಲ, ಆತನು ಪ್ರಕೃತಿ ಸಿದ್ಧವಾದ ಸಾವನ್ನೇ ಹೊಂದಿದ್ದಾನೆಂದು ಹೇಳಿದ್ದೀರ. ನಮಗೆ ಯೇಸು 33 ವರ್ಷಗಳು ಮಾತ್ರವೇ ಬದುಕಿದಂತೆ ತಿಳಿದಿದೆ ಆದರೆ ನಂತರ ಎಷ್ಟುಕಾಲ ಬದುಕಿರುವುದು? ಎಲ್ಲಿ ಬದುಕಿರುವುದು ತಿಳಿದಿಲ್ಲ. ನನಗೇ ಅಲ್ಲ ಪ್ರಪಂಚದಲ್ಲಿ ಯಾರಿಗೂ ಆತನ ಮೂರನೆ ಜೀವನ ಭಾಗದ ವಿಷಯ ತಿಳಿದಿಲ್ಲ. ಪ್ರಪಂಚದಲ್ಲಿ ಹೆಚ್ಚಿನ ಜನರಿಂದ ಆರಾಧಿಸಲ್ಪಡುವ ವ್ಯಕ್ತಿವೊಂದರ ಕೊನೆಯ ಜೀವನವನ್ನು ಕುರಿತು ತಿಳಿಯದಿರುವುದು ದೊಡ್ಡ ಲೋಪವಾಗಿ ಇದೆ. ಯೇಸು ಸಮಾಧಿಯಿಂದ ಹೊರಗೆ ಬಂದ ನಂತರ ದೇವರು ಮೇಲಕ್ಕೆ ಎತ್ತುಕೊಂಡು ಆಕಾಶದಲ್ಲಿ ಬೆರೆತುಹೋಗಿದ್ದಾನೆಂದು ಕೆಲವರು ಹೇಳುತ್ತಿರುವಾಗ ಕೇಳಿದ್ದೇವೆ. ಆ ಮಾತು ನಿಜವಲ್ಲ ಎನ್ನುತ್ತೀರಾ?**

**ಉತ್ತರ :–** ದೇವರು ಸ್ವತಃವಾಗಿ ಮಾನವ ಅವತಾರದಲ್ಲಿ ಭೂಮಿಮೇಲೆ ಅವತರಿಸಿದರೂ ಪ್ರಕೃತಿ ಸಿದ್ಧವಾಗಿ ಹುಟ್ಟಬೇಕು. ಹಾಗೆಯೇ ಪ್ರಕೃತಿ ಸಿದ್ಧವಾಗಿ ಮರಣಿಸಬೇಕಾಗಿರುತ್ತದೆ. ಹಾಗಲ್ಲದೆ ಮೇಲಿಂದ ಇಳಿದುಬರುವುದಾಗಲಿ, ಮೇಲಕ್ಕೆ ಹೋಗುವುದಾಗಲಿ ನಡೆಯುವುದಿಲ್ಲ. ಹಾಗೆ ನಡೆದಿದೆ ಎಂದರೇ ಅದು ಸತ್ಯಕ್ಕೆ ದೂರವಾದ ಮಾತಾಗಿ ಲೆಕ್ಕಿಸಬಹುದು. ಯೇಸು ತಾತ್ಕಾಲಿಕ ಮರಣವನ್ನು ಹೊಂದಿ ಪುನಃ ಎದ್ದ ನಂತರ ಸುಮಾರು ನಲವತ್ತು ದಿನಗಳು ತನ್ನ ಶಿಷ್ಯರಿಗೆ ಕಾಣಿಸುವುದು ನಡೆದಿದೆ. 40 ದಿನಗಳಿಗೂ 33 ಸಲ ಕಾಣಿಸಿದಂತೆ ತಿಳಿಯುತ್ತಿದೆ. 33 ಸಲವೇ ಕಾಣಿಸಿದ್ದಾನೆನ್ನುವುದಕ್ಕೆ ಆಧಾರ ಇಲ್ಲದಿದ್ದರೂ, ನಮಗೆ ತಿಳಿದ ವಿಧಾನದ ಪ್ರಕಾರ ಯೇಸು 33 ಸಲವೇ ಕಾಣಿಸಿದ್ದಾನೆಂದು ತಿಳಿಯುತ್ತಿದೆ. ಯೇಸು ಅಪರಿಚಿತ ಜೀವನ 30 ವರ್ಷಗಳಾಗಿದ್ದು, ಯೇಸು ಪ್ರಜೆಗಳಿಗೆ

ಸುಪರಿಚಿತ ಜೀವನ ಮೂರು ವರ್ಷಗಳು ಸಾಗಿದೆ. ತನ್ನ ಎರಡು ವಿಧಾನಗಳ ಜೀವನದ ಸಂಖ್ಯೆ 30+3=33 ಆಗಿರುವುದರಿಂದ ಅದು ಎಲ್ಲರಿಗೂ ಜ್ಞಾಪಕ ಇರುವಹಾಗೆ ಸಮಾಧಿಯಿಂದ ಎದ್ದ ನಂತರ 33 ಸಲ ಮಾತ್ರವೇ ಕಾಣಿಸಿದ್ದಾನೆ. ಅಲ್ಲಿಗೆ ತನ್ನ ಅವಶ್ಯಕತೆ ಶಿಷ್ಯರಿಗೆ ಇಲ್ಲವೆಂದು ತಿಳಿದ ಯೇಸು ಅವರಿಗೆ ನಂತರ ಕಾಣಿಸದಂತೆ ಹೋಗಿದ್ದಾನೆ. ಹಾಗೆಂದು ಆತನು ಆಕಾಶದೊಳಗೆ ಹೋಗಲಿಲ್ಲ. ಭೂಮಿ ಮೇಲೆಯೇ ರಹಸ್ಯ ಜೀವನವನ್ನು ಪುನಃ 30 ವರ್ಷಗಳವರೆಗೂ ಸಾಗಿಸಿದ್ದಾನೆ. ತನ್ನ ಅಜ್ಞಾತ ಜೀವನಕ್ಕಾಗಿ ಆತನು ಭೂಭಾಗದ ಮೂಲಕ ಕಾಲುನಡಿಗೆಯಲ್ಲಿ ಇಂದೂ ದೇಶವೆಂದು ಕರೆಯಲ್ಪಡುವ ಭಾರತದೇಶಕ್ಕೆ ಬರುವುದು ನಡೆದಿದೆ. ಒಟ್ಟಾರೆ ಯೇಸುವೊಂದರ ಜೀವನಕಾಲ 63 ವರ್ಷಗಳು.

**ಪ್ರಶ್ನೆ :– ಯೇಸು ಭಾರತದೇಶವನ್ನೇ ಏಕೆ ಆಯ್ಕೆ ಮಾಡಿಕೊಂಡಿದ್ದಾನೆ?**

**ಉತ್ತರ :–** ಯೇಸು ತನ್ನ ಗತ ಜನ್ಮವನ್ನು ಸುಮಾರು ಮೂರು ಸಾವಿರ ವರ್ಷಗಳ ಕೆಳಗೆ ಭಾರತದೇಶದಲ್ಲಿಯೇ ಕಳೆದಿದ್ದಾನೆ. ಆದುದರಿಂದ ಭಾರತದೇಶಕ್ಕೆ ಬಂದಿದ್ದಾನೆಂದು ನಾವು ಅಂದುಕೊಳ್ಳಬಹುದು.

**ಪ್ರಶ್ನೆ :– ಯೇಸು ಭಾರತದೇಶಕ್ಕೆ ಬಂದಂತಾಗಲಿ, ಬಂದಾಗಾಗಲಿ ಯಾರಿಗೂ ತಿಳಿದಿಲ್ಲವಾ? ಆತನ ಶಿಷ್ಯರಿಗೆ ತನ್ನ ಅಜ್ಞಾತ ಜೀವನವನ್ನು ಕುರಿತಾಗಲಿ, ತನ್ನ ಭಾರತ ದೇಶದ ಪ್ರಯಾಣವನ್ನು ಕುರಿತಾಗಲಿ ಹೇಳಿರಲಿಲ್ಲವಾ?**

**ಉತ್ತರ :–** ಯೇಸು ಭಾರತದೇಶಕ್ಕೆ ಬಂದಿರುವುದು ಆ ದಿನಗಳಲ್ಲಿ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಯೇಸು ತನ್ನ ಪ್ರಯಾಣವನ್ನು ಕುರಿತು ಸೂಚನೆಯಾಗಿ ಹೇಳಿದ್ದಾನೆ ಹೊರತು, ಶಿಷ್ಯರು ಮಾತ್ರ ಅದನ್ನು ಕುರಿತು ಪೂರ್ತಿಯಾಗಿ ಕೇಳಿ ತಿಳಿದುಕೊಳ್ಳದೆ ಹೋಗಿದ್ದಾರೆ. ಆದರೇ ಯೇಸೇ ತನ್ನ ಪ್ರಯಾಣವನ್ನು ಕುರಿತು ಸ್ವಲ್ಪ ಹೇಳಿದ್ದಾರೆ. **(ಯೋಹಾನ 8ನೇ ಅಧ್ಯಾಯ 21) "ನಾನು ಹೊರಟು ಹೋಗುತ್ತಿದ್ದೇನೆ. ನೀವು ನನ್ನನ್ನು ಹುಡುಕುತ್ತೀರ ಆದರೆ ನೀವು ಪಾಪದಲ್ಲಿಯೇ ಇದ್ದು ಮರಣಿಸುತ್ತೀರಾ. ನಾನು ಹೋಗುವ ಸ್ಥಳಕ್ಕೆ ನೀವು**

**ಬರಲಾರರೆಂದು ಅವರೊಂದಿಗೆ ಹೇಳಿದನು."** ನಾನು ಹೋಗುವ ಸ್ಥಳಕ್ಕೆ ಅಂದರೇ "ಭಾರತದೇಶಕ್ಕೆ" ಎಂದು ಅರ್ಥ. "ನಾನು ಹೊರಟು ಹೋಗುತ್ತಿದ್ದೇನೆ ನೀವು ಹುಡುಕುತ್ತೀರಾ" ಎಂದು ಸಹ ಹೇಳಿದ್ದಾನೆ. ಈ ಮಾತುಗಳನ್ನು ಯೇಸು ಸಮಾಧಿ ಹೊಂದವುದಕ್ಕಿಂತ ಮೊದಲೇ, ತಾತ್ಕಾಲಿಕ ಮರಣವನ್ನು ಹೊಂದದ ಮೊದಲೇ ಹೇಳಿದ್ದಾನೆ. ಆ ದಿನ ಆ ಮಾತುಗಳನ್ನು ಕುರಿತು ಯಾರೂ ದೊಡ್ಡದಾಗಿ ತಲೆಕೆಡಿಸಿಕೊಳ್ಳಲಿಲ್ಲ.

**ಪ್ರಶ್ನೆ :– ಯೇಸುಗೆ ಬೇಕಾಗಿರುವುದು ಭಾರತದೇಶದಲ್ಲಿ ಏನಿದೆ?**

**ಉತ್ತರ :–** ಯೇಸು ಅಜ್ಞಾತ ಜೀವನವನ್ನು ಭಾರತದೇಶದಲ್ಲಿನ ಗುಜರಾತ್ ರಾಷ್ಟ್ರದಲ್ಲಿಯೇ ಕಳೆದಿದ್ದಾನೆ. ಗತಕಾಲದಲ್ಲಿ ಶ್ರೀಕೃಷ್ಣನ ಜನ್ಮದಲ್ಲಿರುವುದು ಯೇಸೇ ಆಗಿರುವುದರಿಂದ ಪುನಃ ತನ್ನ ಶೇಷ ಜೀವನವನ್ನು ಗುಜರಾತ್‌ನಲ್ಲಿಯೇ ಕಳೆಯಬೇಕೆಂದುಕೊಂಡಿದ್ದಾನೆ. ಅಷ್ಟೇಅಲ್ಲದೆ ಕೃಷ್ಣನು ಮರಣಿಸಿರುವುದು ಗುಜರಾತ್‌ಗು ರಾಜಸ್ಥಾನ್‌ಗು ಮಧ್ಯದಲ್ಲಿರುವ ಅರಣ್ಯದಲ್ಲಿ ಆಗಿರುವುದರಿಂದ ಯೇಸು ಮರಣ ಸಹ ಅದೇ ಸ್ಥಳದಲ್ಲಿ ನಡೆಯಬೇಕಾಗಿರುವುದರಿಂದ ಯೇಸು ಭಾರತದೇಶದಲ್ಲಿನ ಗುಜರಾತ್‌ಗೆ ಬರುವುದು ನಡೆದಿದೆ.

**ಪ್ರಶ್ನೆ :– ಮೂರುಸಾವಿರ ವರ್ಷಗಳ ಹಿಂದೆ ಕೃಷ್ಣನ ಜೀವನ ಕಳೆದುಹೋಗಿದೆ. ಕೃಷ್ಣನ ಜೀವನಕ್ಕು, ಯೇಸು ಜೀವನಕ್ಕು ಮಧ್ಯದಲ್ಲಿ ಎಷ್ಟೋ ಕಾಲ ಕಳೆದುಹೋಗಿದೆ. ಹಾಗಿರುವಾಗ ಯೇಸು ಕೃಷ್ಣನ ಬಗ್ಗೆ ಏಕೆ ಆಲೋಚಿಸಿದ್ದಾನೆ?**

**ಉತ್ತರ :–** ಯೇಸು ಹುಟ್ಟುವಿಕೆ, ಬಾಲ್ಯ ಎರಡು ಕೃಷ್ಣನ ಜೀವನ ಕಳೆದಂತೆ ಅದೇ ಹೋಲಿಕೆಗಳಿಂದ ಯೇಸು ಜೀವನ ಕಳೆದಿದೆ. ಮನುಷ್ಯನ ಜೀವನದಲ್ಲಿ ಸಾವು ಹುಟ್ಟುಗಳೇ ಮುಖ್ಯವಾದವುಗಳಾಗಿ ಇವೆ. ಹುಟ್ಟುವಿಕೆಯೆಲ್ಲಾ ಕೃಷ್ಣನ ಜೀವನದಂತೆಯೇ ಯೇಸು ಜೀವನ ಸಹ ಕಳೆದಿದೆ. ನಂತರ ಸಾವು ಸಹ ಅದೇ ವಿಧವಾಗಿ ಕಳೆಯಬೇಕೆಂದು ಇರುವುದರಿಂದ ಯೇಸು ಭಾರತದೇಶಕ್ಕೆ ಬಂದಿದ್ದಾನೆ. ಕೃಷ್ಣನು ಎಲ್ಲಿ ಮರಣಿಸಿದ್ದಾನೋ ಅದೇ ಅರಣ್ಯದಲ್ಲಿಯೇ ಯೇಸು

ಮರಣಿಸುವುದು ಸಹ ನಡೆದಿದೆ. ಕೃಷ್ಣನು ಮರಣಿಸಿದಾಗ ಆತನ ಹತ್ತಿರ ಯಾರೂ ಇಲ್ಲದಹಾಗೆ, ಯೇಸು ಮರಣಿಸಿದಾಗ ಸಹ ಆತನ ಹತ್ತಿರ ಯಾರೂ ಇಲ್ಲದಂತೆ ಹೋಗಿದ್ದಾರೆ. ಕೃಷ್ಣನು ಮರಣಿಸಿದ ಸ್ಥಳದಲ್ಲಿಯೇ ಯೇಸು ಪ್ರಾಣವನ್ನು ಬಿಡುವುದು ನಡೆದಿದೆ. ಇದಕ್ಕೆಲ್ಲ ಕಾರಣ ಒಂದು ಇದೆ. ಅದೇನೆಂದರೇ! ಕೃಷ್ಣನ ಜನ್ಮದಲ್ಲಿ ಕೃಷ್ಣ ಶರೀರದಲ್ಲಿ ಯಾವ ಶಕ್ತಿಯಾದರೆ ಜೀವಿಯಾಗಿ ನಟಿಸಿದೆಯೋ, ಯಾವ ಶಕ್ತಿಯಾದರೆ ಭಗವದ್ಗೀತೆಯನ್ನು ಕೃಷ್ಣನ ರೂಪದಲ್ಲಿ ಬೋಧಿಸಿದೆಯೋ, ಅದೇ ಶಕ್ತಿ ಯೇಸು ಎನ್ನುವ ಶರೀರದಲ್ಲಿಯೂ ಸಹ ಸೇರಿ ಮೂರು ವರ್ಷಗಳು ಭಗವದ್ಗೀತೆಗೆ ಅನುಸಂಧಾನವಾದ ಬೋಧನೆಯನ್ನು ತಿಳಿಸಿದೆ. ಆದರೇ ಪ್ರಪಂಚದಲ್ಲಿ ಇಲ್ಲಿಯವರೆಗೂ ಕೃಷ್ಣನ ಶರೀರದಲ್ಲಿ ಬಂದುಹೋದ ಶಕ್ತಿಯೇ ಮೂರು ಸಾವಿರ ವರ್ಷಗಳ ನಂತರ ಮತ್ತೊಂದು ಶರೀರದಲ್ಲಿ ಬಂದು ಯೇಸು ಎಂಬ ಹೆಸರಿನಿಂದ ಚಲಾವಣೆ ಆಗಿದೆಯೆಂದು ಯಾರಿಗೂ ತಿಳಿದಿಲ್ಲ. ಗಾಢವಾಗಿ ಯೋಚಿಸುವವರು ಹೊರತು ಈದಿನ ಸಹ ಈ ವಿಷಯವನ್ನು ಯಾರೂ ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಬಂದಿರುವ ಆ ಶಕ್ತಿಯೇ ತನ್ನನ್ನು ಇಂತಹವ ನೆಂದು ಗುರುತಿಸದಂತೆ ನಟಿಸಿಹೋಗಿದೆ. ಆದರೇ ತನ್ನ ಜ್ಞಾನ ಇರುವವರಿಗೆ, ತನ್ನನ್ನು ಕುರಿತು ಆಳವಾಗಿ ಯೋಚಿಸುವವರಿಗೆ ಸ್ವಲ್ಪಮಟ್ಟಿಗೆ ಅರ್ಥವಾಗುವಂತೆ ಎರಡು ಜೀವನಗಳಲ್ಲಿಯು ಒಂದೇ ಹೋಲಿಕೆ ಇರುವ ಸಂಘಟನೆಗಳನ್ನು ಉಳಿಸಿಹೋಗಿದ್ದಾನೆ. ಅವುಗಳೇ ಹುಟ್ಟು, ಸಾವುಗಳಲ್ಲಿಯು ಮತ್ತು ಶಿಶುದಶೆಯಲ್ಲಿಯು ಒಂದೇ ವಿಧವಾದ ಜೀವನವನ್ನು ಕಳೆದಿದ್ದಾನೆ. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನಕ್ಕು, ನಾಲ್ಕು ಸುವಾರ್ತೆಗಳಲ್ಲಿರುವ ಜ್ಞಾನಕ್ಕು ಯಾವ ವ್ಯತ್ಯಾಸ ಇಲ್ಲದಂತೆ ಹೇಳಿದ್ದಾನೆ. ಆದರೇ ಎರಡು ಜ್ಞಾನಗಳು ಒಂದೇ ಎಂಬ ವಿಷಯ ತನ್ನನ್ನು ನಂಬಿದವರಿಗೆ ಹೊರತು ಉಳಿದವರಿಗೆ ಅರ್ಥವಾಗದಂತೆ ಮಾಡಿದ್ದಾನೆ.

ಯೇಸು, ಕೃಷ್ಣನು ಹೇಳಿದ ಜ್ಞಾನ ಒಂದೇ ಆದರೂ ಒಂದಲ್ಲದಂತೆ ಎಲ್ಲರಿಗೂ ಅರ್ಥವಾಗುವಂತೆ ತನ್ನ ಜ್ಞಾನವನ್ನು ಹೇಳಿದ್ದಾನೆ. ಉದಾಹರಣೆಗೆ

ಒಂದೇ ಜ್ಞಾನವಾದರೂ, ಬೇರೆಯಾಗಿ ಹೇಗೆ ಕಾಣಿಸುತ್ತದೆಂದರೇ, 'ಪೂರ್ವದಿಂದ ಎದುರಿಗೆ ಹೋದರೆ ಪಶ್ಚಿಮ ಬರುತ್ತದೆ' ಎಂದು ಭಗವದ್ಗೀತೆಯಲ್ಲಿ ಹೇಳಿ, 'ಪಶ್ಚಿಮದಿಂದ ಎದುರಿಗೆ ಹೋದರೇ ಪೂರ್ವದಿಕ್ಕು ಬರುತ್ತದೆ' ಎಂದು ಬೈಬಲ್‌ನಲ್ಲಿ ಹೇಳಿದ್ದಾನೆ. ಆಲೋಚಿಸಿದರೆ ಎರಡೂ ಒಂದೇ ಅರ್ಥವನ್ನು ಕೊಡುವ ವಾಕ್ಯಗಳೇ ಆದರೂ ಎರಡೂ ಬೇರೆಬೇರೆ ವಾಕ್ಯಗಳಾಗಿ ಕಾಣಿಸುವುದರಿಂದ ಹಿಂದೂಗಳು, ಕ್ರೈಸ್ತರು ನಮ್ಮದು ಬೇರೆಬೇರೆ ಜ್ಞಾನವೆಂದು ಅನ್ನುತ್ತಿದ್ದಾರೆ. ಮೇಲ್ನೋಟಕ್ಕೆ ಎರಡು ವಾಕ್ಯಗಳು ಒಂದಕ್ಕೊಂದು ವಿರುದ್ಧವಾಗಿ ಕಾಣಿಸಿದರೂ ಅದರಲ್ಲಿನ ಭಾವ ಮಾತ್ರ ಒಂದೇಯೆಂದು ಬಹಳಜನ ತಿಳಿಯಲಾರದೆ ಬೇರೆಬೇರೆ ಭಾವನೆಗಳನ್ನು ಹೊಂದಿದ್ದಾರೆ. ನಾವು ಇಲ್ಲಿ ಒಂದುಮಾತನ್ನು ಉದಾಹರಣೆಯಾಗಿ ಹೇಳಿದ್ದೇವೆ. ಅದೇ ಕೃಷ್ಣನು ಹೇಳಿದ ವಾಕ್ಯ, ಯೇಸು ಹೇಳಿದ ವಾಕ್ಯ ನೋಡಿದರೆ ನಾವು ಉದಾಹರಣೆ ಹೇಳಿದಂತೆ ಇರುತ್ತದೆ. ಕೃಷ್ಣನು ಭಗವದ್ಗೀತೆಯಲ್ಲಿ ಕೊನೆಯ ಅಧ್ಯಾಯವಾದ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾನೆ ನೋಡಿರಿ.

**ಶ್ಲೋ॥ ಯಸ್ಯ ನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನಲಿಪ್ಯತೇ।**
**ಹತ್ವಾಪಿ ಸ ಇಮಾನ್ ಲೋಕಾನ್ ನಹಂತಿ ನನಿಬಧ್ಯತೇ॥**

**ಭಾವಾರ್ಥ :– "ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೋ, ಫಲಿತಾಂಶದ ಮೇಲೆ ಯಾರಿಗೆ ಆಸಕ್ತಿಯಿಲ್ಲವೋ, ಅವನು ಈ ಲೋಕದಲ್ಲಿರುವವರನ್ನು ಸಾಯಿಸಿದರೂ, ಆತನು ಹಂತಕನಲ್ಲ. ಹತ್ಯಾಪಾಪ ಆತನನ್ನು ಅಂಟುವುದಿಲ್ಲ."** ಈ ವಾಕ್ಯದಲ್ಲಿ ಒಂದು ಕೆಲಸವನ್ನು ಅಹಂಕಾರ ರಹಿತವಾಗಿ ಮಾಡಿದರೇ, ಆ ಕೆಲಸದಿಂದ ಇತರರು ದುಃಖಪಟ್ಟರೂ, ಮಾಡಿದವನು ಆ ಕೆಲಸವನ್ನು ಮಾಡಿದಂತೆ ಲೆಕ್ಕಿಸಲ್ಪಡುವುದಿಲ್ಲ. ಅಷ್ಟೇ ಅಲ್ಲದೆ ಆತನು ಮಾಡಿರುವ ಕೆಲಸದಲ್ಲಿನ ಪಾಪ ಸಹ ಆತನನ್ನು ಅಂಟುವುದಿಲ್ಲ ಎಂದು ಇದೆ. ಇದನ್ನನುಸರಿಸಿ ಒಂದು ಕೆಲಸ ನಡೆದರೂ ನಡೆಯದಂತೇ ಲೆಕ್ಕಿಸಲ್ಪಡುವುದಕ್ಕೆ ಮುಖ್ಯವಾದ ಕಾರಣ ಆತನಲ್ಲಿನ ಅಹಮ್ ಎನ್ನುವುದು ಇಲ್ಲದಹಾಗೆ ಇರುವುದೇ ಕಾರಣವೆಂದು

ತಿಳಿಯುತ್ತಿದೆ. ಆತನು ಒಬ್ಬನನ್ನು ಹತ್ಯೆ ಮಾಡುವುದಕ್ಕೆ ಎಷ್ಟೋ ಕೋಪದಿಂದಿದ್ದು ಹತ್ಯೆ ಮಾಡಿದರೂ 'ನಾನು' ಎಂಬ ಅಹಂಭಾವ ಇಲ್ಲದಿರುವುದರಿಂದ, ಆತನು ಆ ಕೆಲಸ ಮಾಡದಿರುವುದರೊಂದಿಗೆ ಸಮಾನವಾಗಿಹೋಗಿದೆ. ಆದುದರಿಂದ "ಆತನಿಗೆ ಪಾಪ ಅಂಟದು" ಎಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳುವುದಾಗಿದೆ.

ಇದೇ ವಿಷಯವನ್ನೇ ಅದೇ ಕೃಷ್ಣನಾಗಿರುವ ದೈವಶಕ್ತಿಯೇ ಮತ್ತೊಂದು ರೂಪದಲ್ಲಿ, ಮತ್ತೊಂದು ಹೆಸರಿನಿಂದ ಮೂರು ಸಾವಿರ ವರ್ಷಗಳ ನಂತರ ಬಂದು ಹೇಳಿದಾಗ ಆ ವಿಷಯವನ್ನೇ ಹೇಳಿದರೂ ಸ್ವಲ್ಪ ಬದಲಾವಣೆಯಿಂದ ಹೇಳುವುದರಿಂದ ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಮೇಲಾಗಿ ಹೇಳಿದ ಜ್ಞಾನಕ್ಕೆ ಬೈಬಲ್ ಎಂದು ಹೆಸರಿಟ್ಟು, ಹೇಳಿದವನನ್ನು ಯೇಸು ಎಂದು ಕರೆದಿದ್ದಾರೆ. ಹೆಸರು, ಮನುಷ್ಯ, ಗ್ರಂಥ, ಮಾತು (ವಾಕ್ಯ) ಎಲ್ಲಾ ಬೇರೆಯಾಗಿ ಕಾಣಿಸುವುದರಿಂದ ಇದು ಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿನ ವಾಕ್ಯವೆಂದು ಯಾರೂ ಗುರುತಿಸದೆ ಹೋಗಿದ್ದಾರೆ. ಆದರೇ ಆತನ (ದೇವರ) ಭಕ್ತರು ಆತನನ್ನು ಯಾವಾಗಾದರೂ ಗುರುತು ಹಿಡಿಯುತ್ತಾರೆನ್ನುವಂತೆ ಅಂದಿನ ಕೃಷ್ಣನೇ ನಂತರ ಬಂದಿರುವ ಯೇಸು ಎಂದು ನಾವು ಹೇಳುತ್ತಿದ್ದೇವೆ. ಅಷ್ಟೇ ಹೊರತು ಕೃಷ್ಣನನ್ನು ಬಿಟ್ಟು ಯೇಸು ಹತ್ತಿರಕ್ಕೆ ಬರಬೇಕೆಂದೋ, ಹಿಂದೂಗಳು ಕ್ರೈಸ್ತರಾಗಿ ಬದಲಾಗಿರೆಂದೋ ಹೇಳಲಿಲ್ಲ. ನಾವು ದೈವಿಕವಾದ ಜ್ಞಾನವನ್ನು ಹೇಳಿದರೇ ಅನ್ಯ ಮತ ಪ್ರಚಾರ ಮಾಡುತ್ತಿದ್ದಾರೆಂದು ಆರೋಪಿಸುವವರು ಸಹ ಇದ್ದಾರೆ. ನಾವು ಮೂರು ಮತಗಳನ್ನು ಏಕ ಮಾಡಿ, ಎಲ್ಲಾ ಸಮಾನವಾಗಿ ನೋಡುವವರೇ ಹೊರತು, ಯಾವ ಮತವನ್ನು ನಾವು ವಿಮರ್ಶಿಸಲೂ ಇಲ್ಲ, ಯಾವ ಮತವನ್ನು ನಾವು ಸಮರ್ಥಿಸಲೂ ಇಲ್ಲ.

ಎಲ್ಲಾ ಮತಗಳಿಗು ಒಬ್ಬನೇ ಹಿರಿಯನಾದಾಗ ಯಾವ ಮತ ದೊಡ್ಡದು, ಯಾವ ಮತ ಚಿಕ್ಕದು ಎಂದು ಹೇಳಬಲ್ಲೆವು. ಪ್ರಸ್ತುತ ನಾವು ಕೃಷ್ಣನನ್ನು ಯೇಸುನನ್ನು ಇಬ್ಬರನ್ನು ಒಂದೇಯೆಂದು ಹೇಳಿದಾಗ ನನಗೆ ಇಬ್ಬರೂ ಸಮಾನವೇ ಆಗುತ್ತಾರೆ ಹೊರತು ಒಬ್ಬರು ಹೆಚ್ಚು ಒಬ್ಬರು ಕಡಿಮೆ ಅಲ್ಲ!

ಕೃಷ್ಣನು, ಯೇಸು ಇಬ್ಬರು ಒಬ್ಬರೇ ಆದಾಗ ಅವರು ಹೇಳಿದ ಜ್ಞಾನ ಸಹ ಒಂದೇಯೆಂದು, ಅದನ್ನೇ ಗ್ರಹಿಸಿರೆಂದು ಹೇಳುತ್ತಿದ್ದೇವೆ. ಈಗ ಬೈಬಲ್‌ನಲ್ಲಿನ ಒಂದು ವಾಕ್ಯವನ್ನು ಗಮನಿಸೋಣ. ಮತ್ತಾಯ ಸುವಾರ್ತೆ 5ನೇ ಅಧ್ಯಾಯ 28ನೇ ವಚನದಲ್ಲಿ ಹೀಗೆ ಇದೆ ನೋಡಿರಿ. **(ಮತ್ತಾಯ 5–28) "ಒಬ್ಬ ಸ್ತ್ರೀಯನ್ನು ಮೋಹದ ದೃಷ್ಟಿಯಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ,"** ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ ಮಾತಿಗೆ ಈ ವಚನ ಪೂರ್ತಿ ವಿರುದ್ಧವಾಗಿ ಇರುವಂತೆ ಕಾಣಿಸಿದರೂ ಎರಡೂ ಒಂದೇ ಸಾರಾಂಶವಾದ ಮಾತುಗಳೆಂದು ಯೋಚಿಸುವವರಿಗೆ ಚೆನ್ನಾಗಿ ಅರ್ಥವಾಗುತ್ತದೆ. ಆದರೆ ಕ್ರೈಸ್ತವ ಮತದಲ್ಲಿ ಎಷ್ಟೋ ಜನ ದೊಡ್ಡ ದೊಡ್ಡ ಬೋಧಕರಿದ್ದರೂ ಅವರು ಮತವೆಂಬ ಬಂಧನದಲ್ಲಿ ಸಿಲುಕಿಕೊಂಡು ನಮ್ಮ ಮತ ಬೇರೆ, ನಮ್ಮ ಬೋಧನೆ ಬೇರೆ ಎಂದು ಅನ್ನುತ್ತಿದ್ದಾರೆ. ನಮಗೆ ಕೃಷ್ಣನಲ್ಲಿ ಯೇಸುನಲ್ಲಿ ಒಂದೇಶಕ್ತಿ, ಒಂದೇ ಜ್ಞಾನ ಕಾಣಿಸಿದರೆ ಅವರ ದೃಷ್ಟಿಯಲ್ಲಿ ಕೃಷ್ಣನು ಯೇಸು ಇಬ್ಬರು ಬೇರೆಬೇರೆ ವ್ಯಕ್ತಿಗಳಾಗಿ ಕಾಣಿಸುತ್ತಿದ್ದಾರೆ. ಹಾಗೆಯೇ ಅವರ ಬೋಧನೆಗಳು ಬೇರೆಬೇರೆಯಾಗಿ ಕಾಣಿಸುತ್ತಿವೆ. ಕ್ರೈಸ್ತರಿಗೆ ಕೃಷ್ಣನೆಂದರೇ ಸ್ವಲ್ಪವೂ ಸರಿಹೋಗುವುದಿಲ್ಲ. ಹಾಗೆಯೇ ಹಿಂದೂಗಳಿಗೆ ಯೇಸು ಎಂದರೇ ಪೂರ್ತಿ ಅಸೂಯೆ. ಎರಡು ಮತದವರಿಗು ಕೃಷ್ಣನವೊಂದರ, ಯೇಸುವೊಂದರ ಸ್ಥೂಲ ಜೀವನಗಳೇ ಕಾಣಿಸುತ್ತಿವೆ ಹೊರತು, ಅವರಿಬ್ಬರ ಅಂತರಂಗಗಳು ಕಾಣಿಸುತ್ತಿಲ್ಲ. ಅವರ ಹೊರಗಿನ ಜೀವನ ಪ್ರಕೃತಿ ಸಿದ್ಧವಾದುದು, ಮಾಯೆಯಿಂದ ಕೂಡಿಕೊಂಡಿದೆ. ಸರ್ವಸಾಧಾರಣವಾಗಿ ತಮ್ಮನ್ನು ಯಾರೂ ಗುರುತು ಹಿಡಿಯದಂತೆ ಅವರ ಹೊರಗಿನ ಜೀವನ ಜೋಡಣೆಯಾಗಿದೆ. ಹಾಗಿರುವಾಗ ಹೊರಗಿನ ಜೀವನದಲ್ಲಿ ಮಾಯೆ ಪ್ರಭಾವ ತಿಳಿಯುತ್ತದೆ ಹೊರತು, ಅವರ ಅಂತರಂಗದಲ್ಲಿನ ವಿಧಾನವಾಗಲಿ, ಜ್ಞಾನವಾಗಲಿ ಸ್ವಲ್ಪವೂ ತಿಳಿದಿಲ್ಲ.

ಬಾಹ್ಯ ದೃಷ್ಟಿ ಹೊರತು ಅಂತರ್ ಜ್ಞಾನ ತಿಳಿಯದ ಮನುಷ್ಯರಿಗೆ ಮತ್ತಾಯ ಸುವಾರ್ತೆ 5–28ನೇ ವಚನದಲ್ಲಿರುವ ಯೇಸು ಮಾತನ್ನು, ಭಗವದ್ಗೀತೆ ಮೋಕ್ಷಸನ್ಯಾಸ ಯೋಗದಲ್ಲಿರುವ 17ನೇ ಶ್ಲೋಕದಲ್ಲಿನ ಭಾವನೆಯನ್ನು ಒಂದಾಗಿ

ಹೋಲಿಸಿಕೊಳ್ಳದೆ ಹೋಗುತ್ತಿದ್ದಾರೆ. ಅಜ್ಞಾನಿಗಳಿಗೆ ಅರ್ಥವಾಗದ ರೀತಿಯಲ್ಲಿ ದೇವರು ಕೂಡಾ ಒಂದೇ ವಾಕ್ಯವನ್ನೇ, ಒಂದೇ ಭಾವನೆಯಿರುವ ಮಾತನ್ನೇ ಎರಡು ವಿಧಗಳಾಗಿ, ಪರಸ್ಪರ ವಿರುದ್ಧವಾಗಿ ಕಾಣಿಸುವಂತೆ ಹೇಳಿರುವುದರಿಂದ ಯೋಚಿಸದ ಮನುಷ್ಯರಿಗೆ, ಜ್ಞಾನ ದೃಷ್ಟಿಯಿಲ್ಲದವರಿಗೆ ಎರಡು ಮಾತುಗಳು ಒಂದೇಯೆಂದು ತಿಳಿಯದೆ ಹೋಗಿವೆ. 'ಪೂರ್ವಕ್ಕೆ ಎದುರಾಗಿರುವುದು ಪಶ್ಚಿಮ' ಎಂದಾಗ ಅದಕ್ಕೆ ವಿರುದ್ಧ ಪದಗಳು ಬಳಸಿ ಪಶ್ಚಿಮಕ್ಕೆ ಎದುರಾಗಿರುದು ಪೂರ್ವ ಎಂದು ಹೇಳಿದರೇ, ನೋಡುವುದಕ್ಕೆ ಮೊದಲ ವಾಕ್ಯದಲ್ಲಿನ ಪದಗಳಿಗೂ ಎರಡನೆ ವಾಕ್ಯದಲ್ಲಿನ ಪದಗಳಿಗೂ ಎಷ್ಟೋ ವ್ಯತ್ಯಾಸ ಕಾಣಿಸುತ್ತಿವೆ. ಹಾಗೆ ಕಾಣಿಸಿದಷ್ಟು ಮಾತ್ರಕ್ಕೆ ಎರಡು ಒಂದೇ ಭಾವನೆ ಇವೆಯೆಂದು ಬುದ್ಧಿಯಿಂದ ಯೋಚಿಸುವವರು ಯಾರಾದರೂ ಹೇಳಬಹುದು. ಬುದ್ಧಿಯಿಲ್ಲದವರಿಗೆ ಕೃಷ್ಣನು ಹೇಳಿರುವ ಹಾಗು ಯೇಸು ಹೇಳಿರುವ ಎರಡು ವಾಕ್ಯಗಳು ಬೇರೆ ಭಾವನೆಯಿಂದ ಕಾಣಿಸುತ್ತಿವೆ. ಜ್ಞಾನದೃಷ್ಟಿ ಇಲ್ಲದವರಿಗೆ ಕೃಷ್ಣ, ಯೇಸು ವಾಕ್ಯಗಳು ಬೇರೆಬೇರೆಯಾಗಿ ಕಾಣಿಸುವಂತೆ, ವ್ಯಕ್ತಿಗಳಾಗಿರುವ ಯೇಸು, ಕೃಷ್ಣನು ಬೇರೆಬೇರೆಯವರಾಗಿ, ಬೇರೆಬೇರೆ ಮತದವರಾಗಿ ಕಾಣಿಸಿದ್ದಾರೆ. ಆದ್ದರಿಂದ ಅವರು ಯೇಸುವನ್ನು, ಕೃಷ್ಣನನ್ನು ಮತದಿಂದ ಮುಡಿಹಾಕಿ ಮಾತನಾಡುತ್ತಿದ್ದಾರೆ.

**ಪ್ರಶ್ನೆ :– ಯೇಸು ಕ್ರೈಸ್ತವ ಮತ ಪ್ರವಕ್ತಯೆಂದು ಎಲ್ಲರೂ ಹೇಳುತ್ತಿದ್ದಾರೆ! ಒಂದು ಮತ ಪ್ರವಕ್ತ ಆದಾಗ ಆತನು ಆ ಮತಕ್ಕೆ ಸಂಬಂಧಿಸಿದನೇ ಅಲ್ಲವೇ! ಹಾಗೆಯೇ ಕೃಷ್ಣನು ಕೂಡಾ ಹಿಂದೂ ಮತಸ್ಥನೇ ಅಲ್ಲವೆ?**

**ಉತ್ತರ :–** ಯೇಸು ಎಲ್ಲಿಯಾದರೂ ನಾನು ಹೇಳುವುದು ಕ್ರೈಸ್ತರ ಬೋಧನೆ ಯೆಂದು ಹೇಳಿದ್ದಾನಾ? ಹಾಗೆ ಎಲ್ಲಿಯೂ ಹೇಳಲಿಲ್ಲ. ಆತನು ತನ್ನ ಬೋಧನೆಯಲ್ಲಿ 'ಸಮಸ್ತ ಜನಗಳೆ!' ಎಂದು ಸಂಬೋಧಿಸಿ ಹೇಳಿದ್ದಾನೆ ಹೊರತು, ಓ ಕ್ರೈಸ್ತರೇ! ಎಂದು ಸಂಬೋಧಿಸಲಿಲ್ಲ. ಹಾಗಿರುವಾಗ ಯೇಸು ಕ್ರೈಸ್ತವ ಮತಸ್ಥನೆಂದು, ಆ ಮತದ ಪ್ರವಕ್ತಯೆಂದು ಹೇಳುವುದು ಅನ್ಯಾಯವಾಗುತ್ತದೆ. ಹಾಗೆಯೇ ಕೃಷ್ಣನು ತನ್ನ ಭಗವದ್ಗೀತೆಯಲ್ಲಿ ಸರ್ವಮಾನವರಿಗು ಸಂಬಂಧಿಸಿದ

ಜ್ಞಾನವನ್ನು ಹೇಳಿದ್ದಾನೆ ಹೊರತು ನಾನು ಹೇಳುವುದು ಹಿಂದೂಗಳಿಗೇ ಎನ್ನುವಂತೆ ಎಲ್ಲಿಯಾದರೂ ಹಿಂದೂಗಳ ಹೆಸರಿಟ್ಟು ಹೇಳಿದ್ದಾನಾ? ಹಾಗೆ ಹೇಳದಿರುವಾಗ ಕೃಷ್ಣನನ್ನು ಹಿಂದೂ ಎನ್ನುವುದು ಸಹ ಅನ್ಯಾಯವೇ ಆಗುತ್ತದೆ.

**ಪ್ರಶ್ನೆ :– ಸರಿ ನೀವು ಹೇಳಿದಹಾಗೆ ಯೇಸುನಲ್ಲಿಯು, ಕೃಷ್ಣನಲ್ಲಿಯು ಒಂದೇ ಜ್ಞಾನ ಹೋಲಿಕೆಗಳು ಕಾಣಿಸುತ್ತಿವೆಯೆಂದು ಸ್ವಲ್ಪ ಯೋಚಿಸಿದಾಗ ನಮಗೂ ಸಹ ಸ್ವಲ್ಪ ಅರ್ಥವಾಗಿದೆ. ಹುಟ್ಟುವಿಕೆಯಲ್ಲಿ ಕೃಷ್ಣನೊಂದಿಗೆ ಸಮಾನವಾದ ಹೋಲಿಕೆಗಳು ಕೆಲಸಗಳು ನಡೆದಿವೆ. ಬಾಲ್ಯದಲ್ಲಿ ಸಹ ಅವರಿಬ್ಬರು ರಾಜರಿಂದ ಮರಣಗಂಡವನ್ನು ಎದುರಿಸಿದ್ದಾರೆ. ಆದರೂ ಕ್ಷೇಮವಾಗಿ ಹೊರಬಿದ್ದಿದ್ದಾರೆ. ಕೃಷ್ಣನ ಹುಟ್ಟುವಿಕೆ ನಡೆದಂತೇ ಯೇಸು ಹುಟ್ಟು ಸಹ ನಡೆದಿದೆಯೆಂದು ಪ್ರತ್ಯಕ್ಷ ಸಂಘಟನೆಗಳಿಂದ ತಿಳಿಯುತ್ತಿದೆ. ಆದರೇ ಯೇಸು ಜೀವನ ಇಲ್ಲಿಯವರೆಗೂ 33 ವರ್ಷಗಳೇ ಕಳೆದಿದೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಈಗ ನೀವು ಒಬ್ಬರೇ ಯೇಸುವೊಂದರ ತಿಳಿಯದ ಜೀವನವನ್ನು ಕುರಿತು ಹೇಳುತ್ತಿದ್ದೀರ. ಕೃಷ್ಣನ ಮರಣಕ್ಕು, ಯೇಸು ಮರಣಕ್ಕು ಸಹ ಸ್ವಲ್ಪ ಅವಿನಾಭಾವ ಸಂಬಂಧ ಇದೆಯೆಂದು ನೀವೇ ಹೇಳುತ್ತಿದ್ದೀರ. ಅವರಿಬ್ಬರ ಮರಣಗಳು ಯಾವ ಸಂಬಂಧ ಹೊಂದಿವೆಯೋ ಸ್ವಲ್ಪ ವಿವರವಾಗಿ ಹೇಳಬೇಕೆಂದು ಕೋರುತ್ತಿದ್ದೇವೆ.**

**ಉತ್ತರ :–** ನಾನು ಒಂದು ರಹಸ್ಯವನ್ನು ಹೇಳುತ್ತಿದ್ದೇನೆ ಎಂದರೇ ಅದು ನಾನು ಹೇಳುತ್ತಿಲ್ಲ. ಅದನ್ನು ಹೇಳುವವನು ಬೇರೆಯಾಗಿದ್ದಾನೆಂದು ಮೊದಲೇ ಹೇಳಿದ್ದೇನೆ. ಯಾವಾಗಲೋ ಎರಡುಸಾವಿರ ವರ್ಷಗಳಂದು ಯೇಸು ಮರಣಿಸಿದಾಗ, 5000 ವರ್ಷಗಳ ಪೂರ್ವದಲ್ಲಿ ಕೃಷ್ಣನು ಮರಣಿಸಿದ್ದಾನೆ. ಇಬ್ಬರ ಮರಣಕ್ಕೆ ಸುಮಾರು 3000 ವರ್ಷಗಳ ಮಧ್ಯೆ ಅಂತರ ಕಳೆದುಹೋಗಿದೆ. ಕೃಷ್ಣನು ಮರಣಿಸಿದ 5000 ವರ್ಷಗಳ ಕೆಳಗೆ ಏನು ನಡೆದಿದೆಯೋ ಈಗಿರುವ ನನಗೆ ಹೇಗೆ ತಿಳಿಯುತ್ತದೆ? ಹಾಗೆಯೇ ಎರಡುಸಾವಿರ ವರ್ಷಗಳಂದು ಯೇಸು ಮರಣಿಸಿದ ದಿನದಂದು ಏನು ನಡೆದಿದೆಯೋ ಸಹ ನನಗೆ ತಿಳಿದಿಲ್ಲ. ಆದರೆ

ಆ ಎರಡು ಸಂಘಟನೆಗಳಲ್ಲಿ ಪ್ರತ್ಯಕ್ಷಸಾಕ್ಷಿ ಆತ್ಮ ಇರುವುದರಿಂದ ಆತ್ಮ ಹೇಳಿದರೆ ಅಂದಿನ ಸತ್ಯ ತಿಳಿಯುತ್ತದೆ. ನಾನು ಆತ್ಮವನ್ನು ನಂಬಿದವನು ಆದ್ದರಿಂದ ನನ್ನ ಆತ್ಮವನ್ನು ನಾನು ವಿನಯವಾಗಿ ಕೇಳಿದರೆ ಆತ್ಮ ಎಂತಹ ರಹಸ್ಯವನ್ನಾದರೂ ಹೇಳಬಲ್ಲದು. ಹಾಗೆ ನನ್ನ ಆತ್ಮ ಹೇಳಿದ ರಹಸ್ಯವನ್ನೇ ಹೇಳುತ್ತಿದ್ದೇನೆ ಹೊರತು ನಾನು ಸ್ವತಃವಾಗಿ ಏನೂ ಹೇಳಲಿಲ್ಲ.

ಎಲ್ಲರೂ ಮಾತನಾಡುತ್ತಿದ್ದರೂ ಎಲ್ಲರಲ್ಲಿಯೂ ಮಾತನಾಡುವುದು ಆತ್ಮವೇ ಆಗಿದೆ. ಯಾರೂ ಸ್ವತಃವಾಗಿ ಮಾತನಾಡುವುದಿಲ್ಲ ಎಂದು ಬಹಳಸಲ ನಾನು ಹೇಳಿದ್ದೇನೆ. **'ಆಡಿಸುವ ಆತ್ಮ', 'ನಟಿಸುವ ಆತ್ಮಯೆಂದು'** ಹೆಸರಿಟ್ಟು ಬಹಳ ಪ್ರಸಂಗಗಳು ಹೇಳಿದ್ದೇನೆ. ಅದೆಲ್ಲವೂ ಮೂರು ಗ್ರಂಥಗಳಲ್ಲಿ ಆತ್ಮ ಹೇಳಿದ ವಿಷಯಗಳೇ ಎಂದು ತಿಳಿಯಬೇಕು. ನಿಮಗೆ ಆತ್ಮ ಒಂದು ಪ್ರತ್ಯೇಕವಾಗಿ ಇದೆಯೆಂದು ತಿಳಿದಿಲ್ಲ, ಆದ್ದರಿಂದ ನೀವು ಆತ್ಮವನ್ನು ಏನು ಕೇಳದೆ ನೇರವಾಗಿ ದೇವರನ್ನು ಕೇಳುತ್ತಿದ್ದೀರ. ದೇವರು ಮಾತು, ಕಥೆ ಇಲ್ಲದವನು ಆದ್ದರಿಂದ ಆತನು ಏನು ಹೇಳುವುದಿಲ್ಲ, ಏನು ಕೊಡುವುದಿಲ್ಲ, ಹೇಳುವವನು, ಕೊಡುವವನು ಎಲ್ಲಾ ಆತ್ಮನೇಯೆಂದು ನನಗೆ ತಿಳಿದಿರುವುದರಿಂದ ನಾನು ಆಧ್ಯಾತ್ಮಿಕ ರಹಸ್ಯಗಳನ್ನು ಆತ್ಮನನ್ನೇ ಕೇಳಿ ತಿಳಿದುಕೊಂಡಿದ್ದೇನೆ. ಆತ್ಮ ಆಧ್ಯಾತ್ಮಿಕ ಸಂಬಂಧ ವಿಷಯಗಳನ್ನು ಹೊರತು ಇತರೆ ಯಾವುದನ್ನು ಎಷ್ಟು ಕೇಳಿದರೂ ಹೇಳುವವನಲ್ಲ, ಕೊಡುವವನಲ್ಲ. ನನ್ನಲ್ಲಿನ ನನ್ನ ಆತ್ಮ ಹೇಳಿದ ವಿಷಯದ ಪ್ರಕಾರ ಕೃಷ್ಣನ ಮರಣಕ್ಕು, ಯೇಸು ಮರಣಕ್ಕು ಸಹ ಸಂಬಂಧ ಇದೆಯೆಂದು ತಿಳಿಯಲ್ಪಟ್ಟಿದೆ. ಕೃಷ್ಣನು ಒಟ್ಟು ಬದುಕಿರುವುದು 126 ವರ್ಷಗಳು. ಆತನು ಭಗವದ್ಗೀತೆ ಹೇಳಿರುವುದು ಸುಮಾರು 90 ವರ್ಷಗಳ ಮೇಲೆ ಎಂದು ಹೇಳಬೇಕು. ಖಚಿತವಾಗಿ ಅಳತೆ ಮಾಡಿ ಹೇಳಿದರೆ 96 ವರ್ಷಗಳಲ್ಲಿ ಹೇಳಿದ್ದಾನೆ. ನಂತರ 30 ವರ್ಷಗಳು ಆತನು ಹೊರಗಿನ ಪ್ರಪಂಚಕ್ಕೆ ದೊಡ್ಡದಾಗಿ ತಿಳಿಯಲ್ಪಡಲಿಲ್ಲ. ಅದೇ ವಿಧವಾಗಿ ಯೇಸು ತನಗೆ 33 ವರ್ಷಗಳು ಕಳೆದ ನಂತರ ತನ್ನ ಶಿಷ್ಯರಿಗೆ ಸಹ 30 ವರ್ಷಗಳು ಕಾಣಿಸದಂತೆ ಹೋಗಿದ್ದಾನೆ.

ಹಾಗೆ ಕಾಣಿಸದಂತೆ ಹೋದ ನಂತರ 30 ವರ್ಷಗಳು ಹೊಸ ಸ್ಥಳ ಗುಜರಾತ್‌ನಲ್ಲಿ, ಹೊಸ ದೇಶವಾದ ಭಾರತದೇಶದಲ್ಲಿ ಯಾರಿಗೂ ತಿಳಿಯದಂತೆ ತನ್ನ ಜೀವನವನ್ನು ಕಳೆದಿದ್ದಾನೆ. **ಕೃಷ್ಣನು ಮರಣಿಸಿರುವುದು 126 ವರ್ಷಗಳ ವಯಸ್ಸಿನಲ್ಲಿ, 126 ಎನ್ನುವ ಮೂರು ಸಂಖ್ಯೆಗಳನ್ನು ಏಕ ಮಾಡಿದರೆ 1+2+6=9 ಆಗುತ್ತದೆ**. ದೇವರು ದೊಡ್ಡ ಸಂಖ್ಯೆಯಾದ 9ಆಗಿ ಗುರುತಿಸಲ್ಪಟ್ಟಿದ್ದಾನೆ. ಕೃಷ್ಣನು ಮನುಷ್ಯನಾಗಿದ್ದು ಮರಣಿಸಿದ ನಂತರ ದೇವರಾಗಿ ಬದಲಾಗಿಹೋಗಿ ಪುನಃ ತಕ್ಷಣ ಹುಟ್ಟಲಿಲ್ಲ. ಆದ್ದರಿಂದ ಆತನು ಒಟ್ಟು 9 ಸಂಖ್ಯೆಯಾಗಿ ಆದಾಗ 126 ವರ್ಷಗಳ ವಯಸ್ಸಿನಲ್ಲಿ ಮರಣಿಸುವುದು ನಡೆದಿದೆ. ಅದೇ ವಿಧವಾಗಿ **ಯೇಸು ಮರಣಿಸುವುದು ಸಹ 63 ವರ್ಷಗಳ ವಯಸ್ಸಿನಲ್ಲಿಯೇ ಆತನು ಜೀವಿಸಿದ 63 ವರ್ಷಗಳನ್ನು ಒಂದು ಮಾಡಿದರೆ 6+3=9 ಆಗಿಯೇ ಬರುತ್ತದೆ**. ಕೃಷ್ಣನಂತೆ ಯೇಸು ಸಹ ಮರಣಿಸಿದ ನಂತರ ದೇವರಾಗಿ ಬದಲಾಗಿಹೋಗಿದ್ದಾನೆಂದು ಹೇಳುವುದಕ್ಕೆ ದೊಡ್ಡ ಆಧಾರವಾಗಿ ಆತನು 63 ವರ್ಷಗಳೇ ಜೀವಿಸಿದ್ದಾನೆ. ಈ ವಿಧವಾಗಿ ಕೃಷ್ಣನ ಮರಣ, ಯೇಸು ಮರಣ ಎರಡೂ ಸಮಾನತೆ ಹೊಂದಿವೆಯೆಂದು ಹೇಳಬಹುದು.

ಇದೆಲ್ಲವೂ ಗಮನಿಸಿದ ನಂತರ ಯೇಸು ಪ್ರಕೃತಿ ಸಿದ್ಧವಾಗಿ ಮರಣಿಸಿದ್ದಾನೆಂದು ಹೇಳಬಹುದೆ ಹೊರತು, ಆತನು ಇತರರೊಂದಿಗೆ ಮರಣಿಸಿದ್ದಾನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಯೇಸು ಪ್ರಕೃತಿ ಸಿದ್ಧವಾಗಿ 63 ವರ್ಷಗಳಿಗೆ ಮರಣಿಸಿದಾಗ ಆಗಲೇ ಬಂದಿರುವ ಪ್ರವಾಹಗಳಿಂದ ಹಳ್ಳ ಉಕ್ಕಿ ಹರಿದು ಆತನು ಮರಣಿಸಿದ ಸ್ಥಳದಲ್ಲಿಯೇ ಭೂಸಮಾಧಿ ಮಾಡಲ್ಪಟ್ಟಿದ್ದಾನೆ. ಕೊನೆಗೆ ಆತನ ಮೃತ ದೇಹವನ್ನು ಪ್ರಕೃತಿಯೇ ಅಂತ್ಯಕ್ರಿಯೆಗಳು ಮಾಡಿದಂತಾಗಿದೆ. ಕೃಷ್ಣನು ಮರಣಿಸಿದಾಗ ಸಹ ಆತನ ಸಂಬಂಧಿಕರೆಲ್ಲರೂ ಆತನ ಶರೀರವನ್ನು ಭೂಮಿಯಲ್ಲಿ ಖನನ ಮಾಡಿದಾಗ ಅದೇ ದಿನವೇ ಭಾರೀ ಮಳೆಯಿಂದ ಪ್ರವಾಹಗಳು ಬಂದು ಕೃಷ್ಣನ ಸಮಾಧಿ ಹೊಡೆದುಕೊಂಡು ಹೋಗಿ ಮತ್ತೊಂದುಕಡೆ ಭೂಸಮಾಧಿ ಆಗಿದೆ. ಆಗಲೂ ಸಹ ಕೃಷ್ಣನ ಶರೀರವನ್ನು ಪ್ರಕೃತಿಯೇ ತೆಗೆದುಕೊಂಡುಹೋಗಿ ಭೂಮಿಯಲ್ಲಿ ಹೂತಿಡುವುದು ನಡೆದಿದೆ.

ಈ ವಿಧವಾಗಿ ಮರಣದ ನಂತರ ಅವರಿಬ್ಬರ ಮೃತ ದೇಹಗಳನ್ನು ಪ್ರಕೃತಿ ತನ್ನ ವಶ ಮಾಡಿಕೊಂಡು ಯಾರಿಗೂ ತಿಳಿಯದ ಸ್ಥಳದಲ್ಲಿಟ್ಟು ಕೆಸರಿನ ರೂಪದಲ್ಲಿರುವ ಮೊತ್ತನೆಯ ಮಣ್ಣಿನಿಂದ ಮುಚ್ಚಿಹಾಕಿದೆ. ಹಾಗೆ ಪ್ರಕೃತಿ ಮಾಡುವುದರಿಂದ ಯೇಸು ಸಮಾಧಿಯಾಗಲಿ, ಕೃಷ್ಣನ ಸಮಾಧಿಯಾಗಲಿ ಭೂಮಿಮೇಲೆ ಗುರುತುಗಳು ಇಲ್ಲದಂತೆ ಹೋಗಿವೆ. ಕೃಷ್ಣನ ಸಮಾಧಿ, ಯೇಸು ಸಮಾಧಿ ಭೂಮಿಯಲ್ಲಿ ಎಲ್ಲಿರುವುದು ಯಾರಿಗೂ ತಿಳಿದಿಲ್ಲ. ಅದು ಪ್ರಕೃತಿಗೆ ಮಾತ್ರ ತಿಳಿದಿದೆ.

ಒಬ್ಬನೇ ದೇವರು ಧರ್ಮಗಳನ್ನು ಜ್ಞಾನರೂಪದಲ್ಲಿ ಬೋಧಿಸುವುದಕ್ಕೆ ಬೇರೆಬೇರೆ ಸಮಯಗಳಲ್ಲಿ, ಬೇರೆಬೇರೆ ಆಕಾರಗಳಿಂದ, ಬೇರೆಬೇರೆ ಹೆಸರುಗಳಿಂದ ಭೂಮಿಮೇಲಕ್ಕೆ ಬಂದು ಸ್ವಲ್ಪಕಾಲ ಮನುಷ್ಯರ ಮಧ್ಯದಲ್ಲಿದ್ದು ಪುನಃ ದೇವರಾಗಿಯೇ ಬದಲಾಗಿಹೋಗಿದ್ದಾನೆ. ಬಂದವನು ಯಾರೋ ಖಚಿತವಾಗಿ ಪ್ರಜೆಗಳಿಗೆ ತಿಳಿಯದಂತೆ ಪ್ರಕೃತಿಯೇ ಮಾಡಿದೆ. ದೈವಜ್ಞಾನ ಇಲ್ಲದವರಿಗೆ ದೇವರ ಸುಳಿವು ಯಾವ ಮಾತ್ರವೂ ತಿಳಿಯದಹಾಗೆ ಮಾಡಿದೆ. ಅಷ್ಟೇ ಅಲ್ಲದೆ ಆತನು ಒಬ್ಬನೇಯೆಂದು ತಿಳಿಯದ ಮನುಷ್ಯರಿಗೆ ಆತನ ಸಮಾಧಿ ಸಹ ದಕ್ಕದಂತೆ ಪ್ರಕೃತಿಯೇ ಇಬ್ಬರನ್ನು ಸಮಾಧಿ ಮಾಡಿದೆ. ಇಷ್ಟು ಆಧಾರಗಳನ್ನು ಈದಿನ ಆತ್ಮವೇ ತೋರಿಸುತ್ತಿದೆ. ನೀವು ಒಂದು ಸಲ ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆಯಲ್ಲಿ 10ನೇ ಅಧ್ಯಾಯದಲ್ಲಿ 20ನೇ ವಚನದಲ್ಲಿ ಬರೆದಿರುವುದನ್ನು ನೋಡಿರಿ. **(ಮತ್ತಾಯ 10-20) "ನಿಮ್ಮ ತಂದೆಯ ಆತ್ಮ ನಿಮ್ಮಲ್ಲಿದ್ದು ಮಾತನಾಡುತ್ತಿದ್ದಾನೇ ಹೊರತು, ಮಾತನಾಡುವವರು ನೀವು ಅಲ್ಲ."** ಈ ವಾಕ್ಯವನ್ನು ನೋಡಿದ ನಂತರ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ 15ನೇ ಶ್ಲೋಕವನ್ನು ನೋಡಿರಿ. **"ನಾನು ನಿಮ್ಮ ಹೃದಯ ಪೀಠದ ಮೇಲೆ ಇದ್ದೇನೆ. ನನ್ನಿಂದಲೇ ನಿಮಗೆ ಸ್ಮೃತಿ, ಊಹೆ, ಜ್ಞಾನ ಉಂಟಾಗುತ್ತದೆ** ಎಂದು ಇದೆ. ಈ ವಾಕ್ಯಗಳನ್ನು ಅನುಸರಿಸಿ ನನ್ನೊಳಗಿನ ಆತ್ಮ ಇಲ್ಲಿಯವರೆಗೂ ಹೇಳಿದ ವಿಷಯಗಳನ್ನು ತಿಳಿಸಿದೆಯೆಂದು, ನಾನು ಮಾತ್ರ ಅಲ್ಲವೆಂದು ತಿಳಿಸುತ್ತಿದ್ದೇನೆ.

**ಪ್ರಶ್ನೆ :– ಕೊನೆಯದಾಗಿ ಒಂದು ಪ್ರಶ್ನೆಯನ್ನು ಕೇಳಬೇಕೆಂದುಕೊಂಡಿದ್ದೇನೆ. ಗತ ಕಾಲದಲ್ಲಿ ಯೇಸುಪ್ರಭುವಿನ ಮರಣವನ್ನು ಕುರಿತು ನೀವು ಹೇಳಿದಾಗ ಕೃಷ್ಣನು ಕೊನೆಯದಾಗಿ ಶರೀರದಿಂದ ರಕ್ತ ಸೋರಿಹೋಗಿ ಮರಣಿಸಿದಂತೆ, ಯೇಸು ಸಹ ಕೊನೆಯಲ್ಲಿ ಶರೀರದಿಂದ ರಕ್ತ ಸೋರಿ ಮರಣಿಸಿದ್ದಾನೆಂದು ಹೇಳಿದ್ದೀರ. ಈಗಲೇನೋ ಪ್ರಕೃತಿ ಸಿದ್ಧವಾಗ ಯೇಸು ಮರಣಿಸಿದ್ದಾನೆಂದು ಹೇಳುತ್ತಿದ್ದೀರ. ಈ ವಿಷಯದಲ್ಲಿ ನಮಗೆ ಪೂರ್ತಿ ಅರ್ಥವಾಗಲಿಲ್ಲ. ನೀವು ಹೇಳಿರುವುದೆಲ್ಲಾ ಸತ್ಯವೇ ಇರುತ್ತದೆ. ಆದರೇ ಸತ್ಯವನ್ನು ಗ್ರಹಿಸಿಕೊಳ್ಳದ ಸ್ಥಿತಿಯಲ್ಲಿ ನಾವಿದ್ದೇವೆ. ದಯವಿಟ್ಟು ಸ್ವಲ್ಪ ನಮಗರ್ಥವಾಗುವಂತೆ ಹೇಳಬೇಕೆಂದು ಕೋರುತ್ತಿದ್ದೇವೆ?**

**ಉತ್ತರ :–** ನಿಮ್ಮಲ್ಲಿರುವ ಆಸಕ್ತಿ (ಶ್ರದ್ಧೆ) ಎಷ್ಟು ಇದೆಯೋ ತಿಳಿಯುವುದಕ್ಕೆ ನಾವು ಸ್ವಲ್ಪ ಸಂದಿಗ್ಧದಲ್ಲಿಟ್ಟು ಹೇಳುವುದಾಗಿದೆ. ಈ ವಿಷಯದ ಮೇಲೆ ನಿಮಗೆ ಶ್ರದ್ಧೆ ಇದೆಯಾದ್ದರಿಂದ ನೀನು ಕೇಳಿದ್ದೀಯಾ ನೀನು ಕೇಳಿದಕ್ಕೆ ನಾನು ಆ ವಿಷಯವನ್ನು ಸಂಪೂರ್ಣವಾಗಿ ತಿಳಿಸುತ್ತೇನೆ. ಯೇಸುನನ್ನು ಶಿಲುಬೆ ಮೇಲೆ ಏರಿಸಿದಾಗ ಆತನೊಂದಿಗೆ ಸಹ ಶಿಲುಬೆ ಹಾಕುವುದು ನಡೆದಿದೆ. ಈ ವಿಷಯ ಲೂಕಾ ಸುವಾರ್ತೆ 23ನೇ ಅಧ್ಯಾಯದಲ್ಲಿ 39ನೇ ವಾಕ್ಯದಿಂದ 43ನೇ ವಾಕ್ಯದವರೆಗು ಇದೆ ನೋಡಿರಿ. **(ಲೂಕಾ 23–39, 40, 41, 42, 43) ನೇತಾಕಿರುವ ಆ ಅಪರಾದಿಗಳಲ್ಲಿ ಒಬ್ಬನು ಆತನನ್ನು ದೂಷಿಸುತ್ತಾ "ನೀನು ಕ್ರಿಸ್ತನು ಅಲ್ಲವಾ! ನಿನ್ನನ್ನು ನೀನು ರಕ್ಷಿಸಿಕೊ, ನಮ್ಮನ್ನು ಸಹ ರಕ್ಷಿಸು ಎಂದು" ಹೇಳಿದನು. ಆದರೆ ಎರಡನೆಯವನು ಅವನನ್ನು ಗದರಿಸಿ "ನೀನು ಅದೇ ಶಿಕ್ಷಾವಿಧಿಯಲ್ಲಿ ಇದ್ದೀಯಾ ಆದ್ದರಿಂದ ದೇವರಿಗೆ ಭಯಪಡುವುದಿಲ್ಲವಾ? ನಮಗಾದರೆ ಇದು ನ್ಯಾಯವೇ ನಾವು ಮಾಡಿರುವುದಕ್ಕೆ ತಕ್ಕ ಫಲಿತ ಹೊಂದುತ್ತಿದ್ದೇವೆ ಆದರೆ, ಈತನು ಯಾವ ತಪ್ಪು ಮಾಡಲಿಲ್ಲವೆಂದು ಹೇಳಿ, ಆತನನ್ನು ನೋಡಿ ಯೇಸು ನೀನು ನಿನ್ನ ರಾಜ್ಯದೊಳಗೆ ಬಂದಾಗ ನನ್ನನ್ನು ಜ್ಞಾಪಕ ಮಾಡಿಕೊ ಯೆಂದನು. ಅದಕ್ಕೆ ಆತನು ಅವನೊಂದಿಗೆ ನೀನು ನನ್ನೊಂದಿಗೂ ಸಹ ಪರದೈಸುವಿನಲ್ಲಿ ಇರುತ್ತೀಯಾ ಎಂದು ನಿಶ್ಚಯವಾಗಿ ನಿನ್ನೊಂದಿಗೆ ಹೇಳುತ್ತಿದ್ದೇನೆಂದನು."**

ಈ ವಿಧವಾಗಿ ಯೇಸು ತನ್ನೊಂದಿಗೆ ಶಿಲುಬೆ ಹಾಕಲ್ಪಟ್ಟವನಿಗೆ ಅಭಯಕೊಟ್ಟಿದ್ದಾನೆ. ಯೇಸುನನ್ನು ಕೇಳಿದವನು ಪೂರ್ತಿ ಅಜ್ಞಾನಿ ಅವನಿಗೆ ಜ್ಞಾನ ಸ್ವಲ್ಪವಾದರೂ ತಿಳಿದಿಲ್ಲ. ಅವನು ಕೇಳಿರುವುದು ಮೋಕ್ಷವನ್ನು ಅಲ್ಲ. 'ನೀವು ಭೂಮಿಮೇಲೆ ರಾಜನಾಗಿ ಬಂದರೇ ನನ್ನನ್ನು ಜ್ಞಾಪಕ ಇಟ್ಟುಕೊಂಡು ನನಗೆ ಏನಾದರೂ ಒಳ್ಳೆಯದು ಮಾಡೆಂದು ಕೋರಿದ್ದಾನೆ.' ಯೇಸು ರಾಜ್ಯ ಪರಲೋಕವೆಂದು ಅವನಿಗೆ ತಿಳಿದಿಲ್ಲ. ಅವನ ಉದ್ದೇಶವನ್ನನುಸರಿಸಿ ಯೇಸು ಹಾಗೆಯೇ ಅವನ ಕೋರಿಕೆ ಪ್ರಕಾರ ನೀನು ನನ್ನೊಂದಿಗೆ ಸಹ ಪರದೈಸುವಿನಲ್ಲಿ ಇರುತ್ತೀಯಾ ಎಂದು ಹೇಳಿದ್ದಾನೆ. **ಪರದೈಸು ಎಂದರೇ ಪರದೇಶ** ಎಂದು ಕೂಡಾ ಅರ್ಥ ಬರುತ್ತದೆ. ಯೇಸು ಅವನ ಉದ್ದೇಶವನ್ನು ಅನುಸರಿಸಿ ಹೇಳಿದ ಮಾತನ್ನು ನೆರವೇರಿಸುವುದಕ್ಕೆ ಸಹ ಒಂದು ಕಾರಣವಾಗಿದ್ದು, ಎಲ್ಲಾ ತಿಳಿದಿರುವ ಯೇಸು ಸಮಾಧಿಯಿಂದ ಹೊರಗೆ ಬಂದು 40 ದಿನಗಳು ಕಳೆದ ನಂತರ ತನ್ನ ಅವಶ್ಯಕತೆ ಶಿಷ್ಯರಿಗೆ ಇಲ್ಲವೆಂದು ಗ್ರಹಿಸಿ, ಅಲ್ಲಿಂದ ಹೊರಟು ಭೂಮಾರ್ಗ ವಾಗಿ ಕಾಲುನಡಿಗೆಯಿಂದ ಸುಮಾರು ಐದು ವರ್ಷಗಳಿಗೆ ಭಾರತದೇಶದಲ್ಲಿನ ಗುಜರಾತ್ ರಾಜ್ಯಕ್ಕೆ ಬರುವುದು ನಡೆದಿದೆ. ಗುಜರಾತ್ ನಿಂದ ರಾಜಸ್ಥಾನ್ ಕಡೆ ಇರುವ ಅರಣ್ಯದಲ್ಲಿ ತನ್ನ ಸ್ಥಾವರವನ್ನು ಏರ್ಪ ಡಿಸಿಕೊಂಡಿದ್ದಾನೆ. ಆತನು ಇರುವ ಅರಣ್ಯ ಪ್ರಾಂತ್ಯದೊಳಗೆ ಒಂದು ಕಿಲೋಮೀಟರ್ ವಿಸ್ತೀರ್ಣದಲ್ಲಿ ಯಾವ ಕ್ರೂರಮೃಗಗಳು ಬರುತ್ತಿರಲಿಲ್ಲ. ಒಂದು ಕಿಲೋಮೀಟರ್ ಪ್ರಾಂತವು ಯೇಸು ರಾಜ್ಯವಾಗಿ ಇರುವಾಗ ಅಲ್ಲಿ ಸಾಧು ಪ್ರಾಣಿಗಳೇ ಇರುತ್ತಿದ್ದವು. ಆತನು ಆ ಪ್ರಾಂತಕ್ಕೆ ಬರುವುದಕ್ಕೆ ಐದು ವರ್ಷಗಳ ಕಾಲ ಬೇಕಾಗಿದೆ. ಅಲ್ಲಿಗೆ ಬಂದ ನಂತರ ಸುಮಾರು ನಾಲ್ಕು ವರ್ಷಗಳ ವಯಸ್ಸಿರುವ ಚಿಂಪಾಂಜಿ ಪ್ರಭುವಿಗೆ ಅಭ್ಯಾಸವಾಗಿಹೋಗಿ ಪ್ರಭುವಿನ ಹತ್ತಿರ ಕಾಲ ಕಳೆಯುತ್ತಿತ್ತು. ಆ ಚಿಂಪಾಂಜಿ ಯೇಸುಜೊತೆಗೆ ಸುಮಾರು 20 ವರ್ಷಗಳ ಕಾಲ ಕಳೆದಿದೆ. ಚಿಂಪಾಂಜಿ ಕೋತಿ ಪ್ರತಿದಿನ ಕಾಡಿನೊಳಗೆ ಹೋಗಿ ಬಹಳ ವಿಧಗಳ ಹಣ್ಣುಗಳನ್ನು ತಂದು ಯೇಸುಗೆ ಕೊಡುತ್ತಿತ್ತು ಯೇಸುಗೆ ಜೊತೆಯಾಗಿ ಚಿಂಪಾಂಜಿ ಇದ್ದರೇ,

ಚಿಂಪಾಂಜಿಗೆ ಶ್ರೇಯೋಭಿಲಾಷಿಯಾಗಿ ಯೇಸು ಇರುವಾಗ ಅಲ್ಲಿಯೇ 20 ವರ್ಷಗಳು ಕಳೆದುಹೋಗಿದೆ. ಆಗ ಚಿಂಪಾಂಜಿ ಮರಣಿಸುವುದು ನಡೆದಿದೆ.

ಅರಣ್ಯದಲ್ಲಿ ಜೊತೆಯಾದ ಚಿಂಪಾಂಜಿ ಕೋತಿ ಒಟ್ಟು 25 ವರ್ಷಗಳು ಬದುಕಿದಂತಾಗಿದೆ. ಯೇಸು ಶಿಲುಬೆ ಮೇಲೆ ಪಕ್ಕದ ಅಪರಾಧಿಗೆ ಕೊಟ್ಟ ಮಾತು ಅಲ್ಲಿಗೆ ನೆರವೇರಿದೆ. ಅಲ್ಲಿ ಕೇಳಿದ ಅಪರಾಧಿ ಚಿಂಪಾಂಜಿಯಾಗಿ ಜನ್ಮಿಸಿ ಯೇಸು ಸನ್ನಿಧಾನದಲ್ಲಿ ಕಾಲವನ್ನು ಕಳೆದಿದ್ದಾನೆ. ಯೇಸು ಆ ವಿಧವಾಗಿ ಪಕ್ಕದ ಅಪರಾಧಿಗೆ ಕೊಟ್ಟ ಮಾತನ್ನು ನೆರವೇರಿಸಿದ್ದಾನೆ. ಚಿಂಪಾಂಜಿ ಮರಣಿಸಿದ ನಂತರ ಐದು ವರ್ಷಗಳು ಅರಣ್ಯದೊಳಗೆ ಕಾಲ ಕಳೆದ **ಯೇಸು ನಂತರ ಎಷ್ಟು ಕಾಲಕ್ಕೆ ಎಲ್ಲಿ ಹುಟ್ಟಬೇಕು? ಹೇಗೆ ಹುಟ್ಟಬೇಕು? ಯಾರಾಗಿ ಹುಟ್ಟಬೇಕು?** ಎಂದು ಮೊದಲೇ ನಿರ್ಣಯಿಸಿಕೊಳ್ಳುವುದು ನಡೆದಿದೆ. ನಂತರ ಜನ್ಮ ಭಾರತದೇಶದಲ್ಲಿಯೇ ನಡೆಯಬೇಕೆನ್ನುವ ನಿರ್ಣಯವನ್ನು ಏರ್ಪಡಿಸಿಕೊಂಡು ಬರುವಂತಹ **ಆದರಣಕರ್ತನಾಗಿ** ಹೇಗೆ ಬರಬೇಕೋ ನಿರ್ಣಯಿಸಿಕೊಳ್ಳುವುದು ನಡೆದಿದೆ. ಯೇಸುಗೆ 63 ನೇ ವರ್ಷ ನಡೆಯುತ್ತಿರುವಾಗ ಆತನು ಸಾಧಾರಣ ಜೀವಿಯಾಗಿ ಇದ್ದುಹೋಗಿದ್ದಾನೆ. ಒಂದು ದಿನ ಸಾಯಂಕಾಲ ಗಾಳಿ ಮಳೆ ವಿಪರೀತವಾಗಿ ಬರುವುದು ನಡೆದಿದೆ. ಅಲ್ಲಿ ಪಕ್ಕದಲ್ಲಿಯೇ ಇದ್ದ ವೃಕ್ಷವು ಬೇರುಗಳೊಂದಿಗೆ ಸಹ ಕಿತ್ತುಬಂದು ಆತನ ಮೇಲೆ ಬಿದ್ದು ಉರುಳಿಹೋಗಿದೆ. ಹಾಗೆ ವೃಕ್ಷ ಮುರಿದು ಆತನ ಕಾಲುಗಳ ಮೇಲೆ ಬಿದ್ದು ಉರುಳಿ ಹೋಗುವುದರಿಂದ ಆತನ ಕಾಲುಗಳಿಗೆ ಗಾಯವಾಗಿ ರಕ್ತಸ್ರಾವ ನಡೆಯುತ್ತಿರುವಾಗ ಆತನು ಮೂರ್ಛೆಹೋಗಿ ಸ್ವಲ್ಪ ಸಮಯಕ್ಕೇ ಮರಣಿಸುವುದು ನಡೆದಿದೆ. ಅಲ್ಲಿ ನಡೆದಿರುವುದು ಪ್ರಕೃತಿ ಬೀಭತ್ಸವು, ಆತನು ಯಾರಿಂದಲೂ ಮರಣಿಸಲ್ಪಡದೆ ಪ್ರಕೃತಿ ಸಿದ್ಧವಾಗಿ ವೃಕ್ಷದಿಂದ ಮರಣಿಸುವುದು ನಡೆದಿದೆ.

ಯೇಸು ಮರಣಿಸಿದ ನಂತರ ಆ ಪ್ರಾಂತ್ಯವೆಲ್ಲವೂ ಪ್ರವಾಹಗಳು ಏರ್ಪಟ್ಟಿವೆ. ಪ್ರವಾಹದಲ್ಲಿ ಯೇಸು ಮೃತ ಶರೀರವನ್ನು ನೀರು ಮೇಲೆ ಹೊತ್ತುಕೊಂಡು ಹೋಗಿ ಕೃಷ್ಣನು ಸಮಾಧಿಯಾದ ಸ್ಥಳಕ್ಕೆ ಸಮೀಪವಾಗಿ

ಒಂದು ದಡದ ಪಕ್ಕದಲ್ಲಿ ಭೂ ಸಮಾಧಿ ಮಾಡುವುದಾಗಿದೆ. ಆತನ ಸಮಾಧಿ ಪ್ರಕೃತಿಯೇ ಸ್ವತಃವಾಗಿ ಮಾಡಿದಾಗ, ಆತನ ಮರಣ ಪ್ರಕೃತಿ ಸಿದ್ಧವಾಗಿ ನಡೆದಿದೆ. ಆತನು ಭಾರತದೇಶಕ್ಕೆ ಬಂದು ಅರಣ್ಯದಲ್ಲಿ ಅಷ್ಟುಕಾಲ ಇರುವುದಕ್ಕೆ ಯೇಸುಗೆ ಶಿಲುಬೆ ಹಾಕಲ್ಪಟ್ಟ ದಿನದಂದು ಕೇಳಿದ ಅಪರಾಧಿಯ ಕೋರಿಕೆ ನೆರವೇರಿ ಸುವುದಕ್ಕೇ ಎಂದು ತಿಳಿಯುತ್ತಿದೆ. ಆಗಿನ ಕಾಲದಲ್ಲಿ ಚಿಕ್ಕ ಹಳ್ಳದಂತಹದರಲ್ಲಿ ನೀರು ಹರಿಯುತ್ತಿತ್ತು. ಕೃಷ್ಣನ ಶರೀರ ಗುಜರಾತ್ ಕಡೆಯಿಂದ ಬರುವ ಹಳ್ಳಕ್ಕೆ ಪಕ್ಕದಲ್ಲಿರುವ ದಡದಲ್ಲಿ ಸಮಾಧಿ ಮಾಡಲ್ಪಟ್ಟಿದೆ. ಅರಣ್ಯಕಡೆಯಿಂದ ಯೇಸು ಶರೀರ ಬಂದು ಹಳ್ಳಕ್ಕೆ ಎರಡನೆ ಕಡೆ ದಡದ ಪ್ರಾಂತದಲ್ಲಿ ಹೂತಿಡಲಾಗಿದೆ. ಯೇಸು ಮರಣಿಸಿ ಸಮಾಧಿಯಾಗಿ ಇಲ್ಲಿಗೆ ಎರಡುಸಾವಿರ ವರ್ಷಗಳಾಗಿ ಕಾಲಕ್ರಮವಾಗಿ ಹಳ್ಳದ ರೂಪುರೇಖೆಗಳು ಸಹ ಬದಲಾಗಿಹೋಗಿ ರಹಸ್ಯ ತಿಳಿದವರು ಸಹ ಅವರಿಬ್ಬರ ಸಮಾಧಿ ಸ್ಥಳಗಳು ಗುರುತಿಸಲಾಗದ ವಿಧವಾಗಿ ಬದಲಾಗಿಹೋಗಿವೆ.

**ಒಬ್ಬಾನೊಬ್ಬ ರಾಜನು ಸಮುದ್ರದ ಮೇಲೆ ಪ್ರಕೃತಿಯನ್ನು ಒಂದು ಮಾತಿನಿಂದ ಶಾಸಿಸಿದವನು, ಪ್ರಕೃತಿಯಿಂದ ಮರಣ ಹೊಂದಿ, ಪ್ರಕೃತಿಯಿಂದಲೇ ಅಂತ್ಯಕ್ರಿಯೆಗಳು ಮಾಡಿಸಿಕೊಂಡಿದ್ದಾನೆ. ಆತನು ಪ್ರಪಂಚಕ್ಕೇ ಅಧಿಪತಿ, ಸರ್ವಾಧಿಕಾರಿ ಆತನು ಹೇಗೆ ಅಂದುಕೊಂಡರೆ ಹಾಗೆ ನಡೆಯುತ್ತದೆ. ಆತನು ಯಾವಾಗಾದರೂ ಭೂಮಿಮೇಲೆ ಆದರಣಕರ್ತನಾಗಿ ಜನ್ಮಿಸಿ ತಾನು ಇನ್ನೂ ಹೇಳಬೇಕಾದ ಜ್ಞಾನ ವಿಷಯಗಳನ್ನು ಹೇಳಿಹೋಗುತ್ತಾನೆ.** ಆದರೆ ಆತನು ಈ ಸಲ ಯಾವಾಗ ಬಂದರೂ ಭಾರತದೇಶದಲ್ಲಿಯೇ ಬರುತ್ತಾನೆಂಬ ನಿರ್ಣಯ ನಡೆದುಹೋಗಿದೆ. ಆದ್ದರಿಂದ ಆತನ ಬೋಧನೆಗಳಿಗಾಗಿ ಎಲ್ಲರೂ ಕಾದುಕೊಂಡು ನೋಡೋಣ.

**ಇಂತಿ**

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?



Author :
The Only GURU of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

*****

www.thraithashakam.org